ತತ್ವದರ್ಶನ ಕಲಾವಿದ

# ಶ್ರೀ ಜಿ.ಎಲ್.ಎನ್.ಸಿಂಹ

ಡಾ.ಆರ್.ಎಚ್.ಕುಲಕರ್ಣಿ



ಕರ್ನಾಟಕ ಸರ್ಕಾರ



ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು 2018

# ತತ್ವದರ್ಶನ ಕಲಾವಿದ
# ಶ್ರೀ ಜಿ.ಎಲ್.ಎನ್.ಸಿಂಹ

■ ಡಾ.ಆರ್.ಎಚ್.ಕುಲಕರ್ಣಿ



ಕರ್ನಾಟಕ ಲಲಿತಕಲಾ ಅಕಾಡೆಮಿ

ಬೆಂಗಳೂರು 2018

**Thatva Darshana Kalavida G.L.N. Simha:** A Monograph by Dr. R. H. Kulakarni
Published by Registrar, Karnataka Lalitakala Academy, Kannada Bhavan,
J. C. Road, Bengaluru - 560 002

First Edition : 2018

Copies : 500
Paper Used : 80 GSM N.S.Maplitho
Pages : 64 + 40Color plates = 104
Price : RS. 150/-
Photo courtesy: Ramson Kala Prathistana, Mysuru.
Photos : G. H. Lakshmi Venkatesh & H.S. Dharmendra
ISBN : 978-81-938383-4-1

Published by
**INDRAMMA H. V.**
Registrar
KARNATAKA LALITAKALA ACADEMY
Kannada Bhavan, J. C. Road, Bengaluru - 560 002
www.lalitkalakarnataka.org
e-mail:kla.karnataka@gmail.com

**ತತ್ತ್ವ ದರ್ಶನ ಕಲಾವಿದ ಜಿ.ಎಲ್.ಎನ್. ಸಿಂಹ:** ವ್ಯಕ್ತಿಚಿತ್ರ ರಚನೆ: ಡಾ. ಆರ್. ಎಚ್. ಕುಲಕರ್ಣಿ
ಪ್ರಕಾಶಕರು: ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–560 002

ಮೊದಲ ಮುದ್ರಣ : 2018

ಪ್ರತಿಗಳು : 500
ಬಳಸಿದ ಕಾಗದ : 80 ಜಿಎಸ್ಎಮ್ ಎನ್.ಎಸ್.ಮ್ಯಾಪ್ಲಿಥೋ
ಪುಟಗಳು : 64 + ಛಾಯಚಿತ್ರಗಳು 40ಪುಟ = 104
ಬೆಲೆ : ರೂ.150/–
ಚಿತ್ರ ಕೃಪೆ : **ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು**
ಛಾಯಾಚಿತ್ರಗಳು : ಜಿ. ಹೆಚ್. ಲಕ್ಷ್ಮೀವೆಂಕಟೇಶ್ ಮತ್ತು ಹೆಚ್.ಎಸ್. ಧರ್ಮೇಂದ್ರ

ಪ್ರಕಾಶಕರು
**ಇಂದ್ರಮ್ಮ ಹೆಚ್.ವಿ.**
ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು–560 002
ದೂರವಾಣಿ : 080–22480297



Printed at
ILA Graphics
Bengaluru - 560 026
Ph : 26757159

# ಅಧ್ಯಕ್ಷರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯ ವತಿಯಿಂದ ಪ್ರಕಟವಾಗುತ್ತಿರುವ ಪ್ರಸ್ತುತ ಸರಣಿಯ ವ್ಯಕ್ತಿ ಪರಿಚಯದ (ಮೊನೊಗ್ರಾಫ್) ಪುಸ್ತಕಗಳು ವಿಭಿನ್ನ ಕಲಾತ್ಮಕ ಉದ್ದೇಶಗಳನ್ನು ಹೊಂದಿವೆ. ಕೇವಲ ಚಿತ್ರಕಲಾವಿದರನ್ನು ಕುರಿತಾದ ಹೊತ್ತುಗೆಗಳೇ ಹೆಚ್ಚಾಗಿ ಇಲ್ಲಿಯವರೆಗೂ ಪ್ರಕಟವಾಗುತ್ತಿದ್ದು ಈ ಬಾರಿ ವಿಮರ್ಶೆ, ಕಲೆಯ ಸಂಸ್ಥೆ, ಕಲಾ ಪ್ರಸರಣ ಸಂಸ್ಥೆಗಳ ಬಗ್ಗೆ ಬೆಳಕು ಚೆಲ್ಲುವ ಕಲಾತ್ಮಕ ಅಭಿವ್ಯಕ್ತಿಯಲ್ಲಿ ಜೀವನ ಪರ್ಯಂತವಾಗಿ ತೊಡಗಿಕೊಂಡವರ ವ್ಯಕ್ತಿಚಿತ್ರಗಳೂ ಪ್ರಕಟವಾಗುತ್ತಿವೆ. ಕರ್ನಾಟಕ ಕಲೆ, ಶಿಕ್ಷಣ ಹಾಗೂ ಗುಣಮಟ್ಟ ಕಾಪಾಡಿಕೊಳ್ಳುವಲ್ಲಿ ಈ ವ್ಯಕ್ತಿತ್ವಗಳು ಗುರುತರ ಪಾತ್ರ ವಹಿಸಿರುತ್ತಾರೆ. ಪ್ರಸ್ತುತ  ಲೇಖಕರು ಈ ಎಲ್ಲ ವ್ಯಕ್ತಿತ್ವಗಳನ್ನೂ ಆಳವಾಗಿ ಅಧ್ಯಯನ ಮಾಡಿ, ಅವರ ದೃಶ್ಯಾತ್ಮಕ ಜೀವನಚಿತ್ರಣ ನೀಡಿರುವುದಲ್ಲದೆ ಕಲಾತ್ಮಕ ಹಾಗೂ ಸಾಂಸ್ಕೃತಿಕ ಪ್ರಾಮುಖ್ಯತೆಯನ್ನು, ಕೊಡುಗೆಯನ್ನೂ ಗುರ್ತಿಸಿ ವಿಶ್ಲೇಷಿಸಿದ್ದಾರೆ. ಚಿತ್ರದ ನಿರ್ಮಾಣ ಎಷ್ಟು ಮುಖ್ಯವೋ ಅದರ ಸಂಚಲನವೂ ಅಷ್ಟೇ ಮುಖ್ಯವಾಗುತ್ತದೆ. ಹಳಬರನ್ನು ಸುಲಭಕ್ಕೆ ಮರೆಯಬಾರದ ಸಂಸ್ಕೃತಿ ನಮ್ಮದು. ಜೊತೆಗೆ, ಸಾಧಕರನ್ನು ಕೇವಲ ಗೌರವಿಸುವುದಲ್ಲದೆ, ಅವರುಗಳ ಕೊಡುಗೆಗಳನ್ನು ಸ್ಪಷ್ಟವಾಗಿ, ವಿಶ್ಲೇಷಣಾತ್ಮಕವಾಗಿ ಮುಂದಿನ ಪೀಳಿಗೆಗೆ ಕೊಡಮಾಡುವ ಅಕಾಡೆಮಿಯ ಉದ್ದೇಶದ ಒಂದು ಘಟನೆ ಈ ಪುಸ್ತಕಗಳ ಪ್ರಕಟಣೆ. ಓದುಗರು ಈ ಬರವಣಿಗೆಯನ್ನು, ಪುಸ್ತಕ ವಿನ್ಯಾಸವನ್ನು, ಒಳನೋಟ, ವಿಶ್ಲೇಷಣೆಗಳನ್ನು ತೆರೆದ ಮನದಿಂದ ಸ್ವೀಕರಿಸುತ್ತೀರೆಂದು ಭಾವಿಸುತ್ತೇನೆ.

ಕಲೆಯ ಕುರಿತಾದ ಪ್ರಕಟಣೆ ಲಲಿತಕಲಾ ಅಕಾಡೆಮಿಯ ಮುಖ್ಯ ಉದ್ದೇಶಗಳಲ್ಲೊಂದಾಗಿರುತ್ತದೆ. ಅನೇಕ ಪ್ರತಿಭಾವಂತ ಕಲಾವ್ಯಕ್ತಿಗಳು ಕಲಾಲೋಕದಲ್ಲಿ ತಮ್ಮನ್ನೆ ಅರ್ಪಿಸಿಕೊಂಡಿದ್ದು, ಅವರುಗಳ ಕೃತಿಗಳು ನಿರ್ಮಿಸಿದ ಸಂಸ್ಥೆ, ವ್ಯವಸ್ಥೆಗಳ ಕುರಿತು ಬರೆಯದಿದ್ದಲ್ಲಿ, ಅವರುಗಳು ಸದಾಕಾಲ ತೆರೆಯಮರೆಯಲ್ಲಿಯೇ ಉಳಿದುಕೊಂಡುಬಿಡುತ್ತಾರೆ. ಯಾವ ನಾಡಿನ ಕಲೆಯ ಬಗ್ಗೆ  ಮಾತು, ಬರವಣಿಗೆ, ಸಂವಾದಗಳ ಮೂಲಕ ಸಂವಹನ ಸಾಧ್ಯವಾಗುತ್ತದೋ, ಆ ನಾಡಿನ ಕಲೆ ಮಾತ್ರ ಭವಿಷ್ಯದಲ್ಲಿ ಉಳಿದುಕೊಳ್ಳುವುದು ಸತ್ಯ. ಕರ್ನಾಟಕ ಲಲಿತಕಲಾ ಅಕಾಡೆಮಿಯು ನಿರಂತರವಾಗಿ ಈ ಕಾರ್ಯವನ್ನು ಮಾಡುತ್ತ ಬಂದಿರುತ್ತದೆ. ಭಾರತೀಯ ರಾಜ್ಯ ಲಲಿತಕಲಾ  ಅಕಾಡೆಮಿಗಳಾಲ್ಲಿಯೇ ಅತ್ಯಂತ ಹೆಚ್ಚಿನ ಪ್ರಕಟಣೆಗಳು ಹೊರಬಂದಿರುವುದೇ ನಮ್ಮ ಅಕಾಡೆಮಿಯಿಂದಾಗಿರುತ್ತದೆ.

ಪ್ರಸ್ತುತ ಪುಸ್ತಕ ಮೈಸೂರಿನ ಕಲಾವಿದ ಶ್ರೀ.ಜಿ.ಎಲ್.ಎನ್. ಸಿಂಹ ಅವರ ಕುರಿತದ್ದಾಗಿದೆ. ಶ್ರೀ ಸಿಂಹ ನಮ್ಮ ಹಿರಿಯ ತಲೆಮಾರಿನ ಅತ್ಯಂತ ಸೂಕ್ಷ್ಮಮತಿ ಮತ್ತು ಸೃಜನಶೀಲ ಕಲಾವಿದರಾಗಿದ್ದಾರೆ. ತಮ್ಮ ಜೀವನದುದ್ದಕ್ಕೂ ನಿತ್ಯ ನಿರಂತರವಾಗಿ ಕಲಾಕೃತಿಗಳ ರಚನೆಯನ್ನೇ ಜೀವಾಳ ಮಾಡಿಕೊಂಡಿರುವ ಶ್ರೀ ಸಿಂಹ ಸಂಪೂರ್ಣವಾಗಿ ತಮ್ಮನ್ನು ಕಲಾ ರಚನೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಸಂಸ್ಥೆಯಲ್ಲಿ ಅಧ್ಯಯನಮಾಡಿದ ಅವರು ತಮ್ಮ ಗುರುಗಳು ಹಾಗೂ ಖ್ಯಾತ ಸಹಪಾಠಿಗಳಂತೆ ಕ್ರಿಯಾತ್ಮಕ ಮತ್ತು ಅತ್ಯಂತ ಸೃಜನಶೀಲ ಕಲಾವಿದರಾಗಿದ್ದಾರೆ. ಪ್ರಚಾರ ಬಯಸದ ಮತ್ತು ಎಲೆಮರೆಯ ಕಾಯಿಯಂತೆ, ನಂಜನಗೂಡಿನ ಹತ್ತಿರದ ಕಳಲೆಯಲ್ಲಿ ಕಲಾಋಷಿಯಂತೆ ವಾಸವಾಗಿದ್ದಾರೆ. ಅವರ ಕಲಾ ಸಾಧನೆ ಅತ್ಯಮೂಲ್ಯವಾದದು. ಕರ್ನಾಟಕದ ದೃಶ್ಯಕಲಾ ಪ್ರಪಂಚದಲ್ಲಿ ಅವರಿಗೂ ಒಂದು ವಿಶಿಷ್ಟವಾದ ಸ್ಥಾನವಿದೆ. ಅವರ ಕುರಿತಾದ ಒಂದು ಪರಿಚಯಾತ್ಮಕ ಪುಸ್ತಕವನ್ನು ಅಕಾಡೆಮಿಯಿಂದ ತರುವುದು ನಮಗೆಲ್ಲ ಹೆಮ್ಮೆಯಾಗಿದೆ. ಈ ಪುಸ್ತಕವನ್ನು ರಚನೆ ಮಾಡಿಕೊಟ್ಟ ಡಾ.ಆರ್.ಎಚ್.ಕುಲಕರ್ಣಿ ಕರ್ನಾಟಕದ ಕಲಾಇತಿಹಾಸಕಾರರಲ್ಲಿ ಪ್ರಮುಖರು. ಪ್ರಸ್ತುತ ಚಿತ್ರಕಲಾಪರಿಷತ್ತಿನಲ್ಲಿ ಪ್ರಾಧ್ಯಾಪಕರಾಗಿರುವ ಡಾ.ಕುಲಕರ್ಣಿ ಕರ್ನಾಟಕದ ವಾಸ್ತುಕಲೆ-ಶಿಲ್ಪಕಲೆ ಹಾಗೂ ಚಿತ್ರಕಲೆಯಲ್ಲಿ ವಿಶೇಷವಾದ ಅಧ್ಯಯನಮಾಡಿದ್ದು ರಾಷ್ಟ್ರ-ಅಂತರಾಷ್ಟ್ರಮಟ್ಟದಲ್ಲಿ ವಿಚಾರ ಸಂಕಿರಣಗಳಲ್ಲಿ ಭಾಗವಹಿಸಿ ಪ್ರಬಂಧ ಮಂಡಿಸಿದ್ದಾರೆ. ಪ್ರಸ್ತುತ ಶ್ರೀ ಜಿ.ಎಲ್. ಎನ್ ಸಿಂಹರವರ ಕುರಿತಾದ ಕಿರುಪುಸ್ತಕ ಅವರ ಜೀವನ ಮತ್ತು ಕಲಾಸಾಧನೆಯನ್ನು ಕುರಿತು ಪರಿಚಯಿಸುತ್ತದೆ.

ಶ್ರೀ ಸಿಂಹ ಒಬ್ಬ ಕಲಾವಿದನಾಗಿ ಅವರ ಕೊಡುಗೆ ಅತ್ಯಂತ ಮಹತ್ವದ್ದು. ಅವರ ಕಲಾ ಸೇವೆಯನ್ನು ಗುರುತಿಸಿ ರಾಜ್ಯೋತ್ಸವ ಪ್ರಶಸ್ತಿ, ಲಲಿತಕಲಾ ಅಕಾಡೆಮಿಯ ಗೌರವಕ್ಕೆ ಹಾಗೂ ಇನ್ನಿತರ ಸಂಘಸಂಸ್ಥೆಗಳ ಗೌರವಕ್ಕೂ ಪಾತ್ರರಾಗಿದ್ದಾರೆ. ಅವರ ಬಗ್ಗೆ ನಾಡಿನ ಕಲಾವಿದರಿಗೆ ಮತ್ತು ವಿದ್ಯಾರ್ಥಿಗಳಿಗೆ ಹಾಗೂ ಕಲಾಸಕ್ತರಿಗೆ ಅವಶ್ಯಕವಾಗಿ ತಲುಪಿಸಬೇಕಾದದ್ದು ಅಕಾಡೆಮಿಯ ಹೆಮ್ಮೆಯಾಗಿದೆ.

**ಪ್ರೊ. ಎಂ. ಜೆ. ಕಮಲಾಕ್ಷಿ**
ಅಧ್ಯಕ್ಷರು

# ಪ್ರಕಾಶಕರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರಸಕ್ತ ಸಾಲಿನಲ್ಲಿ ಹಿರಿಯ ಕಲಾವಿದರ ಸಾಧನೆ, ಜೀವನ ಮತ್ತು ಅವರ ಕೃತಿಗಳ ಕುರಿತಂತೆ ಪುಸ್ತಕಗಳನ್ನು ಹೊರತರುವ ಯೋಜನೆಯ ಹಮ್ಮಿಕೊಂಡಿದ್ದು, ಅದರಂತೆ ಮೈಸೂರಿನ ಶ್ರೀ ಜಿ.ಎಲ್.ಎನ್.ಸಿಂಹ ಅವರ ಕುರಿತ ಮೋನೋಗ್ರಾಫ್ ರೀತಿಯಲ್ಲಿ ಪುಸ್ತಕ ಹೊರತರುವ ಯೋಜನೆಯನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯು ರೂಪಿಸಿರುವುದು ಗಮನಾರ್ಹವಾಗಿದೆ.

ಮೈಸೂರಿನ ಶ್ರೀ ಜಿ.ಎಲ್.ಎನ್.ಸಿಂಹ ಅವರು ಸಾಂಪ್ರದಾಯಿಕ ಶೈಲಿಯ ಹಾಗೂ ಸೃಜನಶೀಲ ಕಲಾಕೃತಿಗಳ ರಚನೆಯಲ್ಲಿ ಸಿದ್ಧಹಸ್ತರಾಗಿದ್ದಾರೆ. ತಮ್ಮ ಜೀವನದುದ್ದಕ್ಕೂ ಸಾಕಷ್ಟು ಕಲಾಕೃತಿಗಳನ್ನು ರಚನೆ ಮಾಡಿದ್ದಾರೆ. ಕಲಾಕೃತಿಗಳ ವಸ್ತುವಿನ್ಯಾಸಗಳಲ್ಲಿ ಸಾಕಷ್ಟು ವೈವಿಧ್ಯತೆಗಳಿರುವುದನ್ನು ನಾವು ಅವರ ಕಲಾಕೃತಿಗಳಲ್ಲಿ ಗಮನಿಸಬಹುದು. ಶ್ರೀ ಜಿ.ಎಲ್.ಎನ್.ಸಿಂಹ ಪ್ರಾಯಶಃ ವಿದ್ಯಾರ್ಥಿ ದೆಸೆಯಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಪ್ರಭಾವವನ್ನು ಹೊಂದಿದ್ದು ಅವರ ಗುರುಗಳಾದ ಶ್ರೀ ಎಫ್. ಎಂ.ಸೂಫಿ ಅವರಿಂದ. ಶ್ರೀ ಸೂಫಿಯವರಲ್ಲಿನ ಕಲಾಶ್ರದ್ಧೆ – ಅವರ ಕ್ರಿಯಾತ್ಮಕ ಮತ್ತು ಅನುಭವಾತ್ಮಕವಾದ ನುಡಿಗಳು ವಿದ್ಯಾರ್ಥಿಗಳನ್ನು ಹೆಚ್ಚು ಹೆಚ್ಚು ಕೆಲಸ ಮಾಡಲು ಹುರಿದುಂಬಿಸುತ್ತಿದ್ದವು. ಶ್ರೀ ಸೂಫಿಯವರನ್ನು ಹುಡುಕಿಕೊಂಡು ಮಾರ್ಗದರ್ಶನ ಪಡೆಯಲು ಮತ್ತು ರಚಿಸಿದ ಕಲಾಕೃತಿಗಳನ್ನು ತೋರಿಸಲು ಅವರಿದ್ದಲ್ಲಿಗೆ ಶ್ರೀ ಸಿಂಹ ಹೋಗುತ್ತಿದ್ದುದ್ದು ಅವರ ಕಲಿಕೆಯ ಶ್ರದ್ಧೆಯನ್ನು ಬಿಂಬಿಸುತ್ತದೆ.

ಶ್ರೀ ಜಿ.ಎಲ್.ಎನ್.ಸಿಂಹ ಅವರ ಕಲಾಜೀವನದ ಅತ್ಯಂತ ಪ್ರೌಢವೂ ಹಾಗೂ ಪ್ರಾಯಶಃ ಕಲಾವಿದನಾಗಿ ತಮಗೆ ಅತ್ಯಂತ ಪ್ರಿಯವೂ ಆಗಿರುವ ಕಲಾಕೃತಿಗಳು 1999ರ ನಂತರದಲ್ಲಿ ರಚನೆಯಾಗಿವೆ. ಈ ಮೊದಲು ರಚಿಸಿದ ಚಿತ್ರಗಳು ಅಂದಿನ ಆಸಕ್ತರ ಕೋರಿಕೆಯ ಮೇರೆಗೆ ರಚನೆಯಾದ ಚಿತ್ರಗಳಾಗಿದ್ದವು. ಪ್ರಾಯಶಃ ಅವರು ಕಳಲೆಗೆ ಹೋಗಿ ನೆಲೆನಿಂತ ಮೇಲೆ ತಮ್ಮ ಮನದಾಳದಲ್ಲಿ ಅಡಗಿದ್ದ ಆಧ್ಯಾತ್ಮಿಕ ದರ್ಶನ, ಶಾಸ್ತ್ರಕ್ಕೆ ಪೂರಕವಾದ ರಚನೆಗಳು ಪ್ರಾರಂಭಗೊಂಡು ಅದ್ಭುತ ಕಲಾಕೃತಿಗಳು ಹೊರಹೊಮ್ಮಿದವು. ಆ ಚಿತ್ರಗಳು ಕಲಾವಿದನ ಪರಿಕಲ್ಪನೆ ಹಾಗೂ ಕ್ರಿಯಾತ್ಮಕ ಅಭಿವ್ಯಕ್ತಿಯ ನಿದರ್ಶನಗಳಾಗಿವೆ. ಶ್ರೀ ಜಿ.ಎಲ್.ಎನ್.ಸಿಂಹ ಅವರ ಒಟ್ಟಾರೆ ಕಲಾಕೃತಿಗಳನ್ನು ಅವಲೋಕನ ಮಾಡಿದಾಗ ವೈವಿಧ್ಯಮಯವಾದಂತಹ ಕಲಾಕೃತಿಗಳನ್ನು ಅವರು ರಚನೆ ಮಾಡಿರುವುದು ಕಂಡುಬರುತ್ತದೆ.

ಇಂತಹ ಮೇರು ಕಲಾವಿದರ ಪುಸ್ತಕದ ಲೇಖಕರಾದ ಡಾ. ಆರ್.ಹೆಚ್.ಕುಲಕರ್ಣಿ ಅವರು ಬಹಳ ಸುಂದರವಾಗಿ ಶ್ರೀ ಜಿ.ಎಲ್.ಎನ್.ಸಿಂಹ ಅವರ ಜೀವನ ಮತ್ತು ಸಾಧನೆಯ ಚಿತ್ರಣವನ್ನು ನಮ್ಮ ಮುಂದಿಟ್ಟಿದ್ದಾರೆ ಅವರಿಗೆ ಅಕಾಡೆಮಿಯ ಪರವಾಗಿ ಧನ್ಯವಾದಗಳು. ಅದೇ ರೀತಿ ಈ ಪುಸ್ತಕದ ಮುದ್ರಣಕ್ಕೆ ಸೂಕ್ತ ಸಲಹೆ ನೀಡಿದ ಅಕಾಡೆಮಿಯ ಅಧ್ಯಕ್ಷರಾದ ಪ್ರೊ. ಎಂ.ಜೆ.ಕಮಲಾಕ್ಷಿ ಅವರಿಗೂ, ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಪ್ರಕಟಣಾ ಸಲಹಾ ಸಮಿತಿ ಸದಸ್ಯರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಪುಸ್ತಕವನ್ನು ಅಂದವಾಗಿ ಮುದ್ರಣ ಮಾಡುತ್ತಿರುವ ಮಾಲೀಕರು, ಇಳಾ ಗ್ರಾಫಿಕ್ಸ್, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ಇಂದ್ರಮ್ಮ.ಹೆಚ್.ವಿ**
ರಿಜಿಸ್ಟ್ರಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ

# ಲೇಖಕರ ಮಾತು

ಕರ್ನಾಟಕದ ಕಲಾಪರಂಪರೆಗೆ ಐತಿಹಾಸಿಕ ಹಿನ್ನೆಲೆ ಇದೆ. ಈ ಕಲಾಪರಂಪರೆಯಲ್ಲಿ ಅರಳಿದ ಕಲಾಪ್ರಕಾರಗಳು ಹಲವಾರು: ಚಿತ್ರ-ಶಿಲ್ಪ-ವಾಸ್ತು ಇತ್ಯಾದಿ. ಕಲಾವಿದ ಕೂಡ ಈ ಪರಂಪರೆಯ ಅವಿಭಾಜ್ಯ ಅಂಗ. ಕಲಾವಿದನೇ ಕಲಾಸೃಷ್ಟಿಯ ನೇತಾರನಾಗಿರುವದರಿಂದ ಅವನಿಂದಲೇ ಈ ಪರಂಪರೆಯು ಪಕ್ವಗೊಂಡು ಉನ್ನತವಾಗಿರುವುದು. ಅಂತಹ ಕಲಾಸೃಷ್ಟಿಯ ಕೂಸಾಗಿ ಬೆಳೆದು ಕಲಾಭಿವ್ಯಕ್ತಿಯ ಭಾಗವಾಗಿರುವ ಮೈಸೂರಿನ ಕಲಾವಿದ ಶ್ರೀ ಜಿ.ಎಲ್.ಎನ್.ಸಿಂಹ ರ ಕುರಿತಾದ ಕಿರಿಪುಸ್ತಕವಿದು. ಮೈಸೂರಿನ ಪಾರಂಪರಿಕ ಕಲಾಪರಿಸರದಲ್ಲಿ ಬೆಳೆದು, ಚಾಮರಾಜೇಂದ್ರ ತಾಂತ್ರಿಕ ಕಲಾಶಾಲೆಯಲ್ಲಿ ಕಲಾಭ್ಯಾಸಮಾಡಿ ತಮ್ಮದೇ ಆದಂತಹ ಚಿತ್ರಲೋಕವನ್ನು ಕಟ್ಟಿಕೊಂಡು ಜೀವನ ಸವೆಸಿದವರು ಶ್ರೀ ಸಿಂಹ. ಬಹು ಮೃದುಮಾತಿನ, ಸಂಕೋಚ ಸ್ವಭಾವದ ಹಾಗೂ ಅತ್ಯಂತ ಸ್ವಾಭಿಮಾನಿಯಾದ ಶ್ರೀ ಸಿಂಹ, ಕಲಾಸೃಷ್ಟಿಯಲ್ಲಿ ಜೀವನ ಸವೆಸಿದ ರೀತಿ ಮತ್ತು ಅವರ ಕ್ರಿಯಾತ್ಮಕತೆಯಿಂದ ಸೃಷ್ಟಿಯಾದ ಭಾರತೀಯ ದರ್ಶನ ಶಾಸ್ತ್ರದ ದೃಶ್ಯಾವತರಣಿಕೆಗಳು ಅತ್ಯಂತ ಪ್ರಮುಖ ಕಲಾಕೃತಿಗಳ ಭಾಗವಾಗುತ್ತವೆ. ಜೀವನದುದ್ದಕ್ಕು ಸಾಕಷ್ಟು ಕಷ್ಟಗಳನ್ನು ಅನುಭವಿಸಿ,-ಯಾವುದಕ್ಕೂ ಜಗ್ಗದೆ-ಎದೆಗುಂದದೆ, ಕಲಾಸೃಷ್ಟಿಯಲ್ಲಿ ಒಬ್ಬ ಋಷಿಯಂತೆ ನಿತ್ಯ ನಿರಂತರವಾಗಿ ಮಾಡಿದ ಸಾಧನೆಯ ಪ್ರತೀಕವಾಗಿ ಅವರ ಕಲಾಕೃತಿಗಳು ಕುಸುಮಗಳಾಗಿ ಅರಳಿವೆ.

ವಯಕ್ತಿಕವಾಗಿ ನಾನು ಶ್ರೀ ಸಿಂಹರ ಕುರಿತು ಬಹು ಹಿಂದೆ ತಿಳಿದಿದ್ದರೂ, ಅವರ ಮೂಲ ಕಲಾಕೃತಿಗಳನ್ನು ನೋಡುವ ಮತ್ತು ಅವರೊಂದಿಗೆ ಮಾತನಾಡುವ ಅವಕಾಶ ದೊರೆತಿರಲಿಲ್ಲ. ಅವರಿಗೆ ಶ್ರೀ ಎಂ.ಟಿ.ವಿ ಆಚಾರ್ಯ ಪ್ರಶಸ್ತಿಯನ್ನು ನೀಡಲು(2011) ನಿರ್ಧರಿಸಿದ ಸಮಯದಲ್ಲಿ ಅವರ ಕೆಲವು ಕಲಾಕೃತಿಗಳನ್ನು ನನ್ನ ಅತ್ಯಂತ ಆತ್ಮೀಯರಾಗಿದ್ದ ಹಿರಿಯ ಲೇಖಕ-ಕಲಾವಿದ-ಸಾಮಾಜಿಕ ಹೋರಾಟಗಾರ ದಿ॥ ಯು.ಎಸ್.ವೆಂಕಟರಾಮನ್ ರವರ ಮೂಲಕವಾಗಿ ನೋಡುವ ಅವಕಾಶ ದೊರೆತಿತ್ತು. ಬಹುಶಃ, ಇಂದು ಕರ್ನಾಟಕ ಲಲಿತಕಲಾ ಅಕಾಡೆಮಿಯ ಈ ಮೌಲ್ಯಯುತವಾದ ಕೆಲಸದಿಂದಾಗಿ ನಾನು ಶ್ರೀ ಸಿಂಹರ ಕುರಿತು ಬರೆಯಲು ಸಾಧ್ಯವಾಯಿತು.

ಮೊದಲನೆಯದಾಗಿ ಅಕಾಡೆಮಿಯ ಅಧ್ಯಕ್ಷರಾದ ಪ್ರೊ.ಎಂ.ಜೆ.ಕಮಲಾಕ್ಷಿಯವರು ಹಿರಿಯ ಕಲಾವಿದರು ಮತ್ತು ಕಲಾಪ್ರಾಧ್ಯಾಪಕರು. ಕಳೆದ ಐದು ದಶಕಗಳಿಂದ ಕಲಾ ಸೇವೆಯಲ್ಲಿ ತೊಡಗಿದ್ದಾರೆ. ಶ್ರೀ ಸಿಂಹರ ಕುರಿತು ಅತೀವ ಕಾಳಜಿ ತೋರಿಸಿ ಈ ಪುಸ್ತಕ

ರಚನೆಗೆ ಪ್ರೇರಣೆ ಒದಗಿಸಿದ್ದಾರೆ. ಅಕಾಡೆಮಿಯ ಬಹು ಚಟುವಟಿಕೆಯ ರಿಜಿಸ್ಟ್ರಾರ್ ಆದ ಶ್ರೀಮತಿ ಇಂದ್ರಮ್ಮ ಹೆಚ್.ವಿ. ಈರ್ವರನ್ನು ನಾನು ತುಂಬು ಹೃದಯದಿಂದ ಅಭಿನಂದಿಸುತ್ತೇನೆ. ಅವರ ನಿರಂತರ ಕಲಾ ಕಾಳಜಿ ಇಂತಹ ಹಲವಾರು ಕ್ರಿಯಾತ್ಮಕ ಮುದ್ರಣಗಳನ್ನು ಹೊರತರುತ್ತಿದೆ.

ಶ್ರೀ ಸಿಂಹರವರೊಂದಿಗೆ ನಾನು ಖುದ್ದಾಗಿ ಭೇಟಿಮಾಡಿ ಅವರೊಂದಿಗೆ ಸಂದರ್ಶನ ನಡೆಸಿದ್ದೇನೆ. ಈ ಪುಸ್ತಕದಲ್ಲಿನ ಬಹುತೇಕ ವಿಷಯಗಳು ಅವರೇ ನೀಡಿದ ಮಾಹಿತಿ ಮತ್ತು ಹಂಚಿಕೊಂಡ ಮಾತುಗಳಿಂದ ದಾಖಲಿತವಾಗಿವೆ. ಶ್ರೀ ಸಿಂಹರ ಬಹುತೇಕ ಎಲ್ಲ ಕಲಾಕೃತಿಗಳ ಸಂಗ್ರಹಕಾರ–ಕಲಾ ಸಹೃದಯಿಯಾದ ಮೈಸೂರಿನ ರಾಮ್‌ಸನ್ಸ್ ಕಲಾಪ್ರತಿಷ್ಠಾನದ ಕಾರ್ಯದರ್ಶಿಯೂ ಆದ ಶ್ರೀ ಆರ್.ಜಿ.ಸಿಂಗ್ ಅವರ ಸಹಾಯ ಇಲ್ಲದೇ ಹೋಗಿದ್ದರೆ ಪ್ರಯಶಃ ಈ ಪುಸ್ತಕ ಮುದ್ರಣಕಾಣುವದಕ್ಕು, ಮತ್ತು ನನ್ನ ಬರವಣಿಗೆಯೂ ಸಾಧ್ಯವಾಗುತ್ತಿರಲಿಲ್ಲ. ಅವರು ಶ್ರೀ ಸಿಂಹರ ಭೇಟಿಗೆ ವ್ಯವಸ್ಥೆ ಮಾಡಿದುದಲ್ಲದೆ, ಶ್ರೀ ಸಿಂಹರ ಚಿತ್ರಗಳನ್ನು ನೀಡುವುದಲ್ಲದೆ ಅವರ ಬಗ್ಗೆ ಪ್ರಕಟಿತ ಆಕರಗಳನ್ನು ಒದಗಿಸಿ ಉಪಕಾರ ಮಾಡಿದ್ದಾರೆ. ಅವರಿಗೆ ಮತ್ತು ಅವರ ಮಿತ್ರ ಶ್ರೀ ಹೆಚ್.ಎಸ್.ಧರ್ಮೇಂದ್ರ ಕೂಡ  ಮೂಲಪ್ರತಿಯನ್ನು ಪರಾಮರ್ಷಿಸಿ ಸೂಕ್ತ ಸಲಹೆಗಳನ್ನು ನೀಡುವುದಲ್ಲದೇ, ಪುಸ್ತಕದ ರಕ್ಷಾಪುಟ(ಕವರ್ ಪೇಜ್)ವನ್ನು ಸೊಗಸಾಗಿ ವಿನ್ಯಾಸ ಮಾಡಿದ್ದಾರೆ. ಈರ್ವರಿಗೂ ನನ್ನ ನೆನಕೆಗಳು ಸಲ್ಲುತ್ತವೆ.

ಶ್ರೀ.ಜಿ.ಎಲ್.ಎನ್ ಸಿಂಹ ಅವರ ಕುಟುಂಬದ ಸದಸ್ಯರೂ ನನ್ನ ಈ ಕೆಲಸದಲ್ಲಿ ನೆರವಾಗಿದ್ದಾರೆ. ಅವರಿಗೂ ನನ್ನ ನೆನಕೆಗಳು ಸಲ್ಲುತ್ತವೆ.

ಶ್ರೀ ಸಿಂಹರ ಭೇಟಿಯಲ್ಲಿ ನನ್ನ ಆತ್ಮೀಯರಾದ ಡಾ. ಲಕ್ಷ್ಮಣಸಿಂಗ್ ಆರ್. ರಾಠೋಡ್ ಪ್ರಾಧ್ಯಾಪಕರು, ಕಾವಾ, ಮೈಸೂರು, ನನ್ನ ಬಹುತೇಕ ಕ್ಷೇತ್ರಕಾರ್ಯದಲ್ಲಿ ಜೊತೆಗಿರುವ ಮಿತ್ರರು, ಇಲ್ಲಿಯೂ ನನ್ನೊಂದಿಗೆ ಇದ್ದು ಛಾಯಚಿತ್ರದಾಖಲೆ ಮಾಡಿದ್ದಾರೆ,ಹಾಗೂ ನನ್ನ ಸಹೊದ್ಯೋಗಿ–ಮಿತ್ರ ಶ್ರೀ ಹೆಚ್.ಎ.ಅನಿಲಕುಮಾರ್ ಮತ್ತು ನನ್ನ ಕುಟುಂಬದ ಸದಸ್ಯರಿಗೆ ನನ್ನ ನೆನಕೆಗಳು ಸಲ್ಲುತ್ತವೆ. ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಈ ಸದವಕಾಶ ಕಲ್ಪಿಸಿದ್ದಕ್ಕಾಗಿ ಮತ್ತೊಮ್ಮೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

**ಡಾ.ಆರ್.ಎಚ್.ಕುಲಕರ್ಣಿ**
**ಬೆಂಗಳೂರು**
**12-07-2018**




ಬಾಲಗಣೇಶ. ೧೯೯೯
ಕಾಗದದ ಮೇಲೆ ಪೋಸ್ಟರ್ ಬಣ್ಣ. ೫೧-೬೧ ಸೆ.ಮೀ.
ಸಂಗ್ರಹ: ಶ್ರೀಮತಿ ಭಾನುಮತಿ ದೇವಿ, ಮೈಸೂರು

BALA GANESHA. 1999
Poster colours on paper. 51x61 cms
Collection: Smt. Bhanumati Devi, Mysuru



ಶ್ರೀ ರಾಮ ಪಟ್ಟಾಭಿಷೇಕ. ೨೦೦೦
ಕಾಗದದ ಮೇಲೆ ಪೋಸ್ಟರ್ ಬಣ್ಣ. ೫೧-೬೧ ಸೆ.ಮೀ.
ಸಂಗ್ರಹ: ಖಾಸಗಿ

SRI RAMA PATTABHISHEKA. 2000
Poster colours on paper. 51x61 cms
Collection: Private



ಮುಂಡಿಬೆಟ್ಟದ ದೇವಾಲಯದ ಮೂಲಮೂರ್ತಿ. ೧೯೯೩
ಗದದ ಮೇಲೆ ಪೋಸ್ಟರ್ ಬಣ್ಣ. ೫೧-೬೧ ಸೆ.ಮೀ.
ಗ್ರಹ: ಮಹಾರಾಜಕುಮಾರಿ ಇಂದ್ರಾಕ್ಷಿ ದೇವಿ, ಬೆಂಗಳೂರು

DEITY IN SANCTUM SANCTORUM, CHAMUNDI HILL TEMPLE. 1993
Poster colours on paper. 51x61 cms
Collection: Maharajakumari Indrakshi Devi, Bengaluru



ಶ್ರೀ ರಾಘವೇಂದ್ರ ಸ್ವಾಮಿಗಳು. ೧೯೯೯
ಕಾಗದದ ಮೇಲೆ ಪೋಸ್ಟರ್ ಬಣ್ಣ. ೫೧–೬೧ ಸೆ.ಮೀ.
ಸಂಗ್ರಹ: ಶ್ರೀ ಕೆ. ಮಾಧವರಾವ್. ಆಚಾರ್ಯ ಗುರುಕುಲ ಶಾಲೆ. ಕಳಲೆ

SRI RAGHAVENDRA SWAMY. 199
Poster colours on paper. 51x61 cm
Collection: Sri K. Madhava Rao, Acharya Gurukula School, Kalal

# ಒಳಪುಟಗಳಲ್ಲಿ..

# 1 ಪೀಠಿಕೆ

ಕರ್ನಾಟಕದ ದೃಶ್ಯಕಲಾಲೋಕದ ಅಭಿಜಾತಕಲಾವಿದರಲ್ಲಿ ಮೈಸೂರಿನ ಕಲಾವಿದ ಶ್ರೀ.ಜಿ.ಎಲ್.ಎನ್.ಸಿಂಹ ಒಬ್ಬರು. ಶ್ರೀ ಜಿ.ಎಲ್.ಎನ್.ಸಿಂಹ ಹುಟ್ಟಿದ್ದು 19ನೆಯ ಡಿಸೆಂಬರ್ 1937 ಮೈಸೂರಿನಲ್ಲಿ. ಸಾಮಾನ್ಯ ವೈದಿಕ ಕುಟುಂಬದಿಂದ ಬಂದ ಸಿಂಹ ಕಲಾವಿದನಾದದ್ದು ಒಂದು ವಿಶಿಷ್ಟ ಸಂದರ್ಭವೇ ಆಗಿದೆ. ಬಾಲ್ಯದಲ್ಲಿಯೇ ತಂದೆ-ತಾಯಿಯವರ ಪ್ರೀತಿಯಿಂದ ವಂಚಿತರಾದರು. ಆರಂಭದಿಂದಲೂ ಸಾಕಷ್ಟು ಕಷ್ಟಕರ ಜೀವನದ ಅನುಭವವನ್ನು ಕಂಡ ಜಿ.ಎಲ್.ಎನ್.ಸಿಂಹ ಕಲಾವಿದನಾಗಿ ಎಲೆ ಮರೆಯ ಕಾಯಿಯಂತೆ ಸುಮಾರು ಆರು ದಶಕಗಳ ಕಾಲ ಕಲಾಕೃತಿಗಳನ್ನು ರಚಿಸಿದ್ದಾರೆ ಮತ್ತು ರಚಿಸುತ್ತಿದ್ದಾರೆ.

ಶ್ರೀ ಸಿಂಹ ಅವರ ಬಾಲ್ಯ ಅವರ ಅಕ್ಕ ರಂಗನಾಯಕಮ್ಮ ಮತ್ತು ಭಾವ ಶ್ರೀನಿವಾಸಾಚಾರ್ಯ ಅವರ ಆರೈಕೆಯಲ್ಲಿ ಕಳೆಯಿತು. ವಿದ್ಯಾಭ್ಯಾಸವು ಮೈಸೂರಿನಲ್ಲಿಯೇ ಆಯಿತು. ಮೈಸೂರು ರಾಜಪರಿವಾರದವರ ಗುರು ಪರಂಪರಾ ಮಠವಾದ ಶ್ರೀ ವೈಷ್ಣವ ಆಚರಣೆಯ ಪರಕಾಲಮಠ (ಜಗನ್ಮೋಹನ ಅರಮನೆಯ ಹತ್ತಿರದಲ್ಲಿಯೇ ಇರುವುದು) ಅವರ ವೈದಿಕ ವ್ಯಾಸಂಗಕ್ಕೆ ಸಹಾಯಕವಾಯಿತು. ಅಲ್ಲಿನ ಕೃಷ್ಣ ಯಜುರ್ವೇದದ ಅಧ್ಯಯನ/ಪಾಠಗಳು, ಅಲ್ಲಿನ ವೈದಿಕ ಸಂಪ್ರದಾಯದ ವಾತಾವರಣ-ಆಚರಣೆಗಳು ಸಹಜವಾಗಿ ಬಾಲಕ ಸಿಂಹರ ಮನಸ್ಸಿನಲ್ಲಿ ಆರಂಭದಿಂದಲೇ ಆಧ್ಯಾತ್ಮಿಕತೆಯ ಭಾವವನ್ನು ಆಳವಾಗಿ ಬಿತ್ತಿದವು. ಪ್ರಾಯಶಃ ಸಿಂಹ ಅವರಿಗೆ ಪ್ರಾಚೀನ ಪಾರಂಪರಿಕ ತತ್ವಶಾಸ್ತ್ರಗಳಲ್ಲಿ ಸಾಕಷ್ಟು ಆಸಕ್ತಿಯಿದ್ದುದರಿಂದ ಸಹಜವಾಗಿ ವೇದಾಧ್ಯಯನ-ಪಠಣಗಳಲ್ಲಿ ಹೆಚ್ಚಿನ ಗಮನವಿಟ್ಟು ಅಧ್ಯಯನಶೀಲರಾದರು.

ಶ್ರೀ ಸಿಂಹ ಅತ್ಯಂತ ಸ್ವಾಭಿಮಾನಿ ಕಲಾವಿದ. ಕಲಾಧ್ಯಯನಮಾಡಿ, ಉದ್ಯೋಗವನ್ನು ಮಾಡಿ, ಸ್ವತಂತ್ರಕಲಾವಿದನಾಗಿ ಜೀವನ ಸಾಗಿಸುವಾಗ ಸಾಕಷ್ಟು ಏಳು-ಬೀಳುಗಳನ್ನು ಕಂಡರೂ, ತಮ್ಮ ಸಮಸ್ಯೆಯನ್ನು ಎಂದೂ ಯಾರಮುಂದೆಯೂ ಹೇಳಿಕೊಂಡವರಲ್ಲ. ಕಲಾವಿದನಾಗಿ ಪ್ರಶಸ್ತಿಗಳಿಗಾಗಿ ಎಂದೂ ಕೈಚಾಚದೆ, ಸಹಾಯಕ್ಕಾಗಿ ಯಾರನ್ನೂ ಬೇಡದೆ ತನ್ನದೇ ಕಲಾಲೋಕವನ್ನು ಸೃಷ್ಟಿಸಿಕೊಂಡು ಇರುವುದರಲ್ಲಿಯೇ ನೆಮ್ಮದಿಯ ಬದುಕನ್ನು ಸವೆಸಿದವರು.

ಶ್ರೀ ಸಿಂಹಅವರ ಕಲಾಬದುಕು ಪ್ರಾರಂಭವಾದದ್ದು ಮೈಸೂರಲ್ಲಿ. ತಮ್ಮ ಕಾಲದುದ್ದಕ್ಕೂ ಅತ್ಯಂತ ಮನೋಜ್ಞವಾದ ಕಲಾಕೃತಿಗಳನ್ನು ರಚಿಸುತ್ತ ತಮ್ಮದೇ ಆದಂತಹ ಪಾರಂಪರಿಕ ಶೈಲಿಯನ್ನು ಹುಟ್ಟುಹಾಕಿದ್ದಾರೆ. ಪ್ರಾಯಶಃ ಅವರದೇ ಮಾತುಗಳಲ್ಲಿ ಹೇಳುವುದಾದರೆ- ಭಾರತೀಯ ಪಾರಂಪರಿಕ ಚಿತ್ರ ಶೈಲಿ ಅವರದು[1]. ಶ್ರೀ ಸಿಂಹರ ಚಿತ್ರಕಲೆಯು ಬಹುದೊಡ್ಡ ಕಲಾಪರಂಪರಾ ಹಿನ್ನೆಲೆಯಲ್ಲಿಬೆಳೆದು ಬಂದಿದೆ. ಕಲಾವಿದನ ಕಲಾಕೃತಿಗಳು ಪಕ್ವವಾಗಿಉನ್ನತವಾದ ಆದರ್ಶಗಳನ್ನು ಮತ್ತು ಧ್ಯೇಯೋದ್ದೇಶಗಳನ್ನು ಬಿಂಬಿಸುವಲ್ಲಿ ಆ ಕಲಾಪ್ರಕಾರದ ಪಾರಂಪರಿಕ ಹಿನ್ನೆಲೆ ಕಾರಣವಾಗುತ್ತದೆ. ಆ ಹಿನ್ನೆಲೆಯನ್ನು ಸ್ಥೂಲವಾಗಿ ಇಲ್ಲಿ ಗಮನಿಸಬಹುದು.

ಕರ್ನಾಟಕವು ದೃಶ್ಯಕಲೆ ಮತ್ತು ಪ್ರದರ್ಶನ ಕಲೆಗಳ ಆಗರವಾಗಿದೆ. ಪ್ರಾಚೀನ ಕಾಲದಿಂದಲೂ ದೇವಾಲಯ ವಾಸ್ತು- ಶಿಲ್ಪಕಲೆ- ಭಿತ್ತಿಚಿತ್ರ ಕಲೆ ಹಾಗೂ ಪ್ರದರ್ಶನ ಕಲೆಗಳಲ್ಲಿ ನೃತ್ಯ, ಸಂಗೀತ- ನಾಟಕ ಮೊದಲಾದ ಕ್ಷೇತ್ರಗಳು ಪಾರಂಪರಿಕವಾಗಿ ಬೆಳೆದುಬಂದಿವೆ. ಅವುಗಳ ಅಭಿವೃದ್ಧಿಗೆ ಆಯಾಕಾಲಘಟ್ಟಗಳ ರಾಜ-ಮಹಾರಾಜರು ಮತ್ತು ಸ್ಥಳೀಯ ಆಸಕ್ತರು ಕಾರಣರಾಗಿದ್ದಾರೆ. ಆದುದರಿಂದಲೇ ಕರ್ನಾಟಕವು ದೃಶ್ಯಕಲೆಯ ಶ್ರೀಮಂತ ನೆಲೆಯಾಗಿದೆ. ಕರ್ನಾಟಕದ ಕಲೆಗೆ ಮೈಸೂರು ತನ್ನದೇ ಆದಂತಹ ವಿಶಿಷ್ಟ ಕೊಡುಗೆಯನ್ನು ನೀಡುತ್ತಾ ಬಂದಿದೆ. ಮೈಸೂರಿನ ಒಡೆಯರ್ ರಾಜಮನೆತನದ ಬಹುತೇಕ ಎಲ್ಲ ರಾಜರುಗಳು ಕಲಾಪ್ರಿಯರಾಗಿದ್ದು ವಿವಿಧ ಕಲೆಗಳಿಗೆ ಆಶ್ರಯವನ್ನು ನೀಡುವುದಲ್ಲದೇ, ಅವುಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಅದರ ಫಲವಾಗಿ ದೃಶ್ಯಕಲೆಯು ಭಿತ್ತಿ ಚಿತ್ರಗಳ ಮೂಲಕವಾಗಿ ಹಾಗೂ ಬಿಡಿಯಾದ ಪಾರಂಪರಿಕ ಮೈಸೂರು ಶೈಲಿಯ ಚಿತ್ರಗಳ ಮೂಲಕವಾಗಿ ಬೆಳೆದುಬಂದಿದೆ. ಮೈಸೂರಿನ ಮಹಾರಾಜರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರವರ ಆಸಕ್ತಿಯಿಂದಾಗಿ ಭಿತ್ತಿಚಿತ್ರ ಪರಂಪರೆ ಉನ್ನತ ಹಂತಕ್ಕೆ ತಲುಪಿತ್ತು. ಅಲ್ಲದೇ ಅವರು ಕಲಾವಿದರಿಗೆ ಆಶ್ರಯವನ್ನೂ ನೀಡಿದ್ದರು. ಅವರದೇ ರಚನೆಯಾದ ಸಚಿತ್ರ ರಾಮಾಯಣ, ದೇವೀ ಭಾಗವತದ ಕೃತಿಗಳೂ ಕೂಡಾ ಸಾಕಷ್ಟು ಚಿತ್ರಗಳನ್ನು ಹೊಂದಿವೆ."ಶ್ರೀ ತತ್ವನಿಧಿ" ದೃಶ್ಯ-ವಿಶ್ವಕೋಶವು ಚಿತ್ರಕಲೆಯ ಬಗೆಗೆ ಅವರಿಗಿದ್ದ ಆಸಕ್ತಿಯನ್ನು ಮತ್ತು ಪ್ರೇಮವನ್ನು ಸೂಚಿಸುತ್ತದೆ. ಅವರ ಕಾಲದಲ್ಲಿಯೇ ಶಿಕಾರಿಪುರ ತಿಪ್ಪಾಜಿ, ತಿಪ್ಪಣ್ಣ, ದುರ್ಗದ ವೆಂಕಟಪ್ಪ, ಜಾವಗಲ್ಲು ನರಸಿಂಹಯ್ಯ ಮೊದಲಾದ ಕಲಾವಿದರಿದ್ದರು. ಅರಮನೆಯ ಕಲಾವಿದರಿಗೆ ಶ್ರೀ ಮುಮ್ಮಡಿಯವರಿಂದಲೇ ಪೋಷಣೆ ದೊರೆಯುತ್ತಿತ್ತು. ಅಂತಹ ಪರಂಪರೆಯನ್ನು ಹೊಂದಿದ ಮೈಸೂರು ಸಾಮ್ರಾಜ್ಯವೂ ನಂತರದಲ್ಲಿ ವಿಶೇಷವಾಗಿ ಕಲಾಪೋಷಣೆಯನ್ನು ಮುಂದುವರೆಸಿ ಹಲವಾರು ಕಲಾವಿದರ ಅಭ್ಯುದಯಕ್ಕೆ ಕಾರಣವಾಗಿದೆ[2].

# 2 ಶ್ರೀ ಜಿ.ಎಲ್.ಎನ್.ಸಿಂಹರ ವಿದ್ಯಾಭಾಸ

ಶ್ರೀ ಸಿಂಹ ಅವರ ಪ್ರಾಥಮಿಕ ಮತ್ತು ಕಲಾವಿದ್ಯಾಭ್ಯಾಸಗಳು ಮೈಸೂರಿನಲ್ಲಿಯೇ ಆದವು. ಮೈಸೂರು ಅದಾಗಲೇ ಪ್ರಗತಿಪರವಾದ ರಾಜ್ಯವೆಂಬುದಾಗಿ ಪ್ರಸಿದ್ಧಿಯಾಗಿತ್ತು. ಮೈಸೂರಿನಲ್ಲಿ ಪ್ರಾರಂಭಿಸಿದ ಕಾಲೇಜುಗಳು, ವಿಶ್ವವಿದ್ಯಾಲಯ ಹಾಗೂ ತಾಂತ್ರಿಕ ಶಾಲೆಗಳು ಆ ಕಾಲದಲ್ಲಿ ಇಡೀ ದಕ್ಷಿಣಭಾರತಕ್ಕೆ ಮಾದರಿಯಾಗಿದ್ದವು. ಮೈಸೂರು ಮಹಾರಾಜರು ಸ್ವಾತಂತ್ರ್ಯ ಪೂರ್ವದಲ್ಲಿಯೇ ಕಲಾ ಶಾಲೆಯನ್ನು ಪ್ರಾರಂಭಿಸಿ ಕಲೆಯ ಬೆಳವಣಿಗೆಗೆ ನೀರೆರಿದಿದ್ದಾರೆ.1892 ರಲ್ಲಿಯೇ ಚಾಮರಾಜೇಂದ್ರ ತಾಂತ್ರಿಕ ಶಾಲೆ (ಸಿಟಿಐ) ಪೂರ್ವ ಸೂರಿಯಾಗಿದ್ದ ಕೈಗಾರಿಕಾ ತರಬೇತಿ ಶಾಲೆಯು ಮೈದಳೆದಿದ್ದು, ಶಾಲೆಯ ಪ್ರಥಮ ಉದ್ದೇಶವು ಕೈಗಾರಿಕೆಗಳಿಗೆ ನೆರವಾಗಲೆಂಬುದಾಗಿತ್ತು[3]. ವಿಶೇಷವಾಗಿ ಮೈಸೂರು ಚಿತ್ರಕಲೆ ಮತ್ತು ಕರಕುಶಲ ಕಲೆಗೆ ಹೆಸರಾಗಿದ್ದುದರಿಂದ, ತಾಂತ್ರಿಕ ಶಾಲೆಯಲ್ಲಿ ಶ್ರೀಗಂಧ ಕೆತ್ತನೆ, ಗುಡಿಕೈಗಾರಿಕೆ, ಕಂಚು ಶಿಲ್ಪ, ರೇಖಾಚಿತ್ರ ನಂತರ ಚಿತ್ರಕಲೆ, ಶಿಲ್ಪ ಹೀಗೆ ಹಲವು ವಿವಿಧ ರೀತಿಯ, ಜೀವನೋಪಾಯಕ್ಕೆ ದಾರಿಯಾಗಬಲ್ಲ ಶಿಕ್ಷಣವನ್ನು ಪರಿಚಯಿಸಲಾಯಿತು.(1906ರಲ್ಲಿ ಇಂಡಸ್ಟ್ರಿಯಲ್ ಸ್ಕೂಲ್ ಎಂದು ನಜರ್‌ಬಾದಿನಲ್ಲಿ ಆರಂಭವಾಗಿ ನಂತರ 1910/1912ರಲ್ಲಿ ಸಿಟಿಐ ಎಂದು ನಾಮಕರಣಗೊಂಡು ಈಗಿರುವ ಜಾಗಕ್ಕೆ ಸ್ಥಳಾಂತರಗೊಂಡಿತು) ಅದರ ಭಾಗವಾಗಿ ಐರೋಪ್ಯ ಚಿತ್ರಕಲಾ ತತ್ವಗಳು, ಕಲಾ ಶಿಕ್ಷಣದ ಭಾಗವಾಗಿ ಆರಂಭದಿಂದಲೇ ಪ್ರಚುರವಾದವು. ಚಾಮರಾಜೇಂದ್ರ ತಾಂತ್ರಿಕಶಿಕ್ಷಣ ಶಾಲೆ ಪ್ರಾರಂಭವಾಗುವ ಸಂದರ್ಭದಲ್ಲಿಯೇ, ಕೇರಳದ ಖ್ಯಾತ ಚಿತ್ರಕಲಾವಿದ ರವಿವರ್ಮ, ಮೈಸೂರು ರಾಜಮನೆತನದ ಆಹ್ವಾನದ ಮೇರೆಗೆ ರಾಜರ-ಕುಟುಂಬದವರ ಭಾವ ಚಿತ್ರಗಳನ್ನು ರಚಿಸಲು ಮೈಸೂರಿಗೆ ಆಗಮಿಸಿದ್ದರು.

ಆ ಹೊತ್ತಿಗಾಗಲೇ ರವಿವರ್ಮ ಐರೋಪ್ಯ ಶೈಲಿ ಮತ್ತು ಭಾರತೀಯ ಕಥಾವಸ್ತುಗಳ ಚಿತ್ರಣಗಳಲ್ಲಿ ಸಿದ್ಧಹಸ್ತರಾಗಿ ಪ್ರಖ್ಯಾತಿಗಳಿಸಿದ್ದರು. ರವಿವರ್ಮ ತೈಲಮಾಧ್ಯಮದಲ್ಲಿ ರಚಿಸಿದ್ದ ರಾಜಮನೆತನದವರ ಭಾವಚಿತ್ರಗಳು ಆ ಕಾಲದಲ್ಲಿ ಕಲಾಸಕ್ತರಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಹೊಸ ಸಂಚಲನ ಮೂಡಿಸಿದ್ದವು.

ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಶಾಲೆಯಲ್ಲಿ ಹಲವಾರು ಕಲಾವಿದರು ಬೆಳೆದಿದ್ದಾರೆ. ಅವರುಗಳಲ್ಲಿ ಕೇಶವಯ್ಯ, ವೈ.ನಾಗರಾಜು, ಶಂಕರರಾಜು, ಎಸ್.ಆರ್.ಐಯ್ಯಂಗಾರ್, ಎನ್.ಜೆ.ಪಾವಂಜೆ, ಕೆ.ಕೆ.ಹೆಬ್ಬಾರ್[4], ವೈ.ಸುಬ್ರಹ್ಮಣ್ಯರಾಜು, ಎಸ್.ಎನ್.ಸ್ವಾಮಿ, ರಾಮನರಸಯ್ಯ, ಎಂ.ಜೆ.ಶುದ್ಧೋಧನ, ಪಿ.ಆರ್.ತಿಪ್ಪೇಸ್ವಾಮಿ, ಮಧುಗಿರಿರಾಮು, ಎಫ್.ಎಂ.ಸೂಫಿ. ಎನ್.ಎಸ್.ಸುಬ್ಬುಕೃಷ್ಣ, ಮೊದಲಾದ ಕಲಾವಿದರು ಕಲಾ ಶಾಲೆಯ ವಿದ್ಯಾರ್ಥಿಗಳಾಗಿ, ಅಧ್ಯಾಪಕರಾಗಿ ಮತ್ತು ಸ್ವತಂತ್ರವಾದ ಕಲಾವಿದರಾಗಿ ಹೆಸರು ಮಾಡಿದ್ದಾರೆ. ಚಾಮರಾಜೇಂದ್ರ ತಾಂತ್ರಿಕ ಶಾಲೆಯ ವಿದ್ಯಾರ್ಥಿಗಳಾಗಿದ್ದು, ನಂತರದಲ್ಲಿ ಬೇರೆಡೆಯಲ್ಲಿಯೂ ವಿದ್ಯಾರ್ಜನೆ ಮಾಡಿದ ಕೆ.ವೆಂಕಟಪ್ಪ ಚಿತ್ರ ಶಿಲ್ಪಿಎಂದೇ ಪ್ರಖ್ಯಾತರು. ಅದೇ ರೀತಿ ಕೆ.ಕೆ.ಹೆಬ್ಬಾರ್ ರವರು ರಾಷ್ಟ್ರ ಮತ್ತು ಅಂತರರಾಷ್ಟ್ರ ಮಟ್ಟದಲ್ಲಿ ಕಲಾವಿದರಾಗಿ ಹೆಸರುಮಾಡಿದರು. ಇಂತಹ ಕಲಾವಿದರ ಪರಂಪರೆಯನ್ನು ಸಿಟಿಐ ನ ಕಲಾ ಶಾಲೆ ಕಟ್ಟಿಕೊಟ್ಟಿದೆ. ಆ ಕಲಾವಿದರ ಪರಂಪರೆಯಲ್ಲಿ ಸಿಟಿಐನಲ್ಲಿಯೇ ಜಿ.ಎಲ್.ಎನ್.ಸಿಂಹವಿದ್ಯಾಭ್ಯಾಸ ಮಾಡಿದರು.

ಮೈಸೂರಿನ ಕಲಾಶಿಕ್ಷಣ ಪ್ರಾರಂಭ ಮತ್ತು ಬೆಳವಣಿಗೆಯಾದ ಸಂದರ್ಭವನ್ನು ಮತ್ತೊಂದು ಆಯಾಮದಿಂದ ನೋಡಬಹುದು. ಅದು ರಾಷ್ಟ್ರೀಯ ಚಳುವಳಿಯ ಸಂದರ್ಭ. ಭಾರತದಲ್ಲಿ ಬ್ರಿಟೀಶ್ ವಸಾಹತುವಿನ ವಿರುದ್ಧ ಸ್ವಾತಂತ್ರ್ಯ ಚಳುವಳಿ ತೀವ್ರವಾಗಿದ್ದು ಮಹಾತ್ಮಾಗಾಂಧಿ ಮೊದಲಾದ ರಾಷ್ಟ್ರನಾಯಕರು ಭಾರತದ ಸ್ವಾತಂತ್ರಕ್ಕೋಸ್ಕರ ಹೋರಾಟ ನಡೆಸಿದ್ದರು. ಅಂತಹ ಸಂದರ್ಭದಲ್ಲಿಯೇ ಕಲಾ ಶಿಕ್ಷಣ ಒಂದೆಡೆ– ಐರೋಪ್ಯ ಸಂಪ್ರದಾಯದ ಪ್ರಭಾವ ಮತ್ತೊಂದೆಡೆ, ದೇಶಿಯ ಪಾರಂಪರಿಕ ಚಿತ್ರ ಶೈಲಿಗಳನ್ನು ಮೈಗೂಡಿಸಿಕೊಂಡು ಬೆಳೆಯತೊಡಗಿತ್ತು. ಭಾರತದ ಆಧುನಿಕ ಕಲೆಯ ಪ್ರಾರಂಭವೂ ಕೂಡಾ ಇದೆ ಕಾಲಘಟ್ಟಕ್ಕೆ ಗುರುತಿಸಲ್ಪಡುತ್ತದೆ– ಅಮೃತಾ ಶೇರ್ ಗಿಲ್, ಮುಂಬೈನ ಪ್ರೋಗ್ರೆಸ್ಸಿವ್ ಕಲಾವಿದರ ಪಂಥ, ಮತ್ತು ಕಲ್ಕತ್ತಾ ಪ್ರೋಗ್ರೆಸ್ಸಿವ ಕಲಾ ಪಂಥಗಳು, ಇತ್ತ ದಕ್ಷಿಣದಲ್ಲಿ ಮದ್ರಾಸ್ ಆರ್ಟ್ ಅಂಡ ಕ್ರಾಫ್ಟ್ ಶಾಲೆಯ ಪ್ರಾಂಶುಪಾಲರಾಗಿದ್ದ ದೇವಿಪ್ರಸಾದ ರಾಯಚೌಧುರಿ, ನಂತರ ಕೆ.ಸಿ.ಎಸ್ ಪಣಿಕ್ಕರ್‌ರಂಥ ಕಲಾವಿದರು– ಸಾಂಪ್ರದಾಯಿಕ– ಐರೋಪ್ಯ ಕಲಾತುಮುಲಗಳಲ್ಲಿ ತಮ್ಮದೇ ಆದಂತಹ ವಿಶಿಷ್ಟತೆಯನ್ನು ಹುಡುಕಿಕೊಂಡಿದ್ದರು. ಇದರಿಂದಾಗಿ ಸಾಂಪ್ರದಾಯಿಕ ಮತ್ತು ಆಧುನಿಕತೆಯ ರೀತಿ – ರೀವಾಜುಗಳನ್ನು ಮೈಗೂಡಿಸಿಕೊಂಡು ಪ್ರಯೋಗಾತ್ಮಕವಾದ ಕಲಾಕೃತಿಗಳು ರಚನೆಯಾಗತೊಡಗಿದ್ದವು. ಇದರಿಂದಾಗಿ 1930–40ರ ದಶಕದಲ್ಲಿ ಭಾರತೀಯ ಕಲೆ ಭಾರತೀಯ ರಾಷ್ಟ್ರವಾದವನ್ನು ಅಪ್ಪಿಕೊಂಡು, ಮತ್ತೊಂದೆಡೆ, ನವೀನ ಪ್ರಯೋಗಾತ್ಮಕ ಕಲಾ ಚಟುವಟಿಕೆಗಳಿಂದಾಗಿ, ಅಂತರರಾಷ್ಟ್ರೀಯ ಮನ್ನಣೆ ಗಳಿಸುವ ಭರಾಟೆಯಲ್ಲಿತ್ತು. ಇಂತಹ ಸಂದರ್ಭದಲ್ಲಿ ಇತ್ತ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆಯಲ್ಲಿನ ಕಲಾ ಚಟುವಟಿಕೆಗಳು ಮೈಸೂರು ಸಾಂಪ್ರದಾಯಿಕ (ಸಾಂಪ್ರದಾಯಕ ಕಲೆ ಪಠ್ಯದ ಭಾಗವಾಗಿರದಿದ್ದರೂ ವಿದ್ಯಾರ್ಥಿಗಳು ಅಂದು ಪ್ರಚಲಿತದಲ್ಲಿದ್ದ ಈ ಶೈಲಿಯಲ್ಲಿ ಚಿತ್ರ ರಚನೆಯನ್ನು ಮಾಡುತ್ತಿದ್ದರು) ಮತ್ತು ಪಾಶ್ಚಾತ್ಯ ಶೈಲಿಗಳ ಅನುಕರಣೆಯಿಂದಾಗಿ ತಮ್ಮದೇ ಆದಂತಹ ಹೊಸ ಸಂಪ್ರದಾಯವನ್ನು ಪ್ರಚುರಪಡಿಸತೊಡಗಿತ್ತು. ಹೀಗಾಗಿ ಮೈಸೂರಿನಲ್ಲಿಯ ಕಲೆ ಒಂದು ರೀತಿಯಲ್ಲಿ ವಿದ್ಯಾರ್ಥಿಗಳಿಗೆ ವಿವಿಧತೆಯ ದರ್ಶನಮಾಡಿಸುವಂತಿತ್ತು.

## ಮೈಸೂರು ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆಯಲ್ಲಿ ಅಧ್ಯಯನ:

ಜಿ.ಎಲ್.ಎನ್.ಸಿಂಹ ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆಗೆ ಸೇರಿದಾಗ ಆಗಲೇ ಭಾರತಕ್ಕೆ ಸ್ವಾತಂತ್ರ್ಯ ಬಂದು ಏಳು ವರ್ಷವಾಗಿತ್ತು. ಮೈಸೂರು ಸಾಮ್ರಾಜ್ಯವೂ ಕೂಡಾ ಜಯಚಾಮರಾಜೇಂದ್ರ ಒಡೆಯರವರ ಆಸಕ್ತಿಯ ಮೇರೆಗೆ ಭಾರತ ಗಣರಾಜ್ಯದ ಅವಿಭಾಜ್ಯ ಅಂಗವಾಗಿ ಸೇರಿತ್ತು. ಈ ಹೊತ್ತಿಗಾಗಲೇ ಕರ್ನಾಟಕ ಏಕೀಕರಣದ ರಣಕಹಳೆ ಮೊಳಗಿ– ಹೈದರಾಬಾದ್, ಮುಂಬೈ, ಮದ್ರಾಸ್ ಪ್ರಾಂತಗಳಲ್ಲಿ ಹಂಚಿಹೋಗಿದ್ದ ಕರ್ನಾಟಕದ ಭೂಭಾಗವು ಒಂದಾಗಿ ಏಕೀಕರಣವಾಗಿ ಅಖಂಡ ಕರ್ನಾಟಕದ ಉದಯವಾಗತೊಡಗಿತ್ತು. ಅಲ್ಲದೇ ಭಾರತೀಯ ಕಲೆಯು ಆಧುನಿಕತೆಯನ್ನು

ಮೈಗೂಡಿಸಿಕೊಂಡು, ಅಂತರರಾಷ್ಟ್ರೀಯ ಮಟ್ಟದಲ್ಲಿ ತನ್ನದೇ ಛಾಪನ್ನು ಮೂಡಿಸತೊಡಗಿತ್ತು. ಅಂತಹ ಸನ್ನಿವೇಶದಲ್ಲಿ– ಸಮಾಜಿಕ– ರಾಜಕೀಯ ಹಾಗೂ ಧಾರ್ಮಿಕ ಧೃವೀಕರಣಗಳಾಗುವ ಸಂದರ್ಭದಲ್ಲಿ ಜಿ.ಎಲ್.ಎನ್ ಸಿಂಹ ಕಲಾಭ್ಯಾಸ ಮೈಸೂರಿನಲ್ಲಿ ನಡೆದಿತ್ತು.

ಕಲಾವಿದ್ಯಾರ್ಥಿಯಾಗಿ ಜಿ.ಎಲ್.ಎನ್.ಸಿಂಹ ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆಯಲ್ಲಿ 1954 ರಿಂದ 1959 ರವರೆಗೆ ಡಿಪ್ಲಮೋ ವಿದ್ಯಾರ್ಥಿಯಾಗಿದ್ದರು. ಶ್ರೀಸಿಂಹರು ಆರಂಭದಿಂದಲೂ ಚಿತ್ರಕಲೆಯಲ್ಲಿ ಆಸಕ್ತಿ ಇದ್ದುದನ್ನು ಗಮನಿಸಿದ್ದ ಅವರ ಭಾವನವರು– ಮೆಟ್ರಿಕ್ಯುಲೇಷನ್ ಪರೀಕ್ಷೆ ಆದಮೇಲೆ ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಶಾಲೆಯ ಉಪಪ್ರಾಂಶುಪಾಲರಾಗಿದ್ದ ಖ್ಯಾತ ಕಲಾವಿದ ಎಂ.ಜೆ.ಶುದ್ಧೋಧನ ಅವರ ಹತ್ತಿರ ಕರೆದುಕೊಂಡುಹೋಗಿ ವಿದ್ಯಾಲಯಕ್ಕೆ ಸೇರಿಸಿಕೊಳ್ಳುವಂತೆ ಮನವಿ ಮಾಡಿದ್ದರು. ಪ್ರಾಯಃ ಶ್ರೀ ಸಿಂಹರ ಜೀವನದಲ್ಲಿ ಕಲಾವಿದನಾಗುವ ಮಿಡಿತ ವಿದ್ಯಾರ್ಥಿದೆಸೆಯಿಂದಲೇ ಮೊಳಕೆಯೊಡೆಯತೊಡಗಿತ್ತು. ಅವರೇ ಹೇಳುವಂತೆ ಚಿತ್ರಕಲೆಯ ವಿದ್ಯಾರ್ಥಿಯಾಗಿದ್ದು ಒಂದು ರೀತಿಯ ಯೋಗಾಯೋಗ. ಆಕಾಲದಲ್ಲಿ ವೈ. ಸುಬ್ರಹ್ಮಣ್ಯರಾಜು, ಎಸ್.ಎನ್.ಸ್ವಾಮಿ ಮತ್ತು ಎಫ್.ಎಂ.ಸೂಫಿಯವರು ಶ್ರೀ.ಸಿಂಹ ಅವರಿಗೆ ಅಧ್ಯಾಪಕರಾಗಿದ್ದರು. ಎಲ್ಲ ಅಧ್ಯಾಪಕರದೂ ಒಂದೊಂದು ಕಲಾ ವೈಶಿಷ್ಟ್ಯತೆ. ನೈಜ ಚಿತ್ರಣ, ರೇಖಾ ಚಿತ್ರಣ, ಪ್ರಕೃತಿ ಚಿತ್ರಣ–ತೈಲ ವರ್ಣ ಮೊದಲಾದ ತಾಂತ್ರಿಕೆಯಲ್ಲಿ ಸಿದ್ಧ ಹಸ್ತರಾದ ಅಧ್ಯಾಪಕರೇ. ಸಿಂಹ ಈ ಅಧ್ಯಾಪಕರ ಮಾರ್ಗದರ್ಶನದಲ್ಲಿ ಕಲಾ ಅಧ್ಯಯನ ಪ್ರಾರಂಭಿಸಿದರು. (ಸಿಂಹರವರೊಂದಿಗೆ ನಡೆಸಿದ ಸಂಭಾಷಣೆಯಲ್ಲಿ ಅವರೇ ಹೇಳಿದ ಹಾಗೆ) ಎಫ್.ಎಂ. ಸೂಫಿ ಅವರು ಶ್ರೀ ಸಿಂಹರ ನೆಚ್ಚಿನ ಅಧ್ಯಾಪಕರಾಗಿದ್ದರು ಅವರ ಸಂಬಂಧವನ್ನು ಕೂಡ ಮನದಾಳದಿಂದ ಹೇಳಿಕೊಂಡಿದ್ದಾರೆ. ಕೇವಲ ಶಿಕ್ಷಕ–ವಿದ್ಯಾರ್ಥಿಯ ಸಂಬಂಧವಾಗಿರದೇ ತಂದೆ–ಮಗನ ರೀತಿಯಾಗಿ ಗಟ್ಟಿಯಾದ ಭಾವನಾತ್ಮಕ ಮತ್ತು ಅಂತಃಕರಣಪೂರ್ಣವಾದ ಸಂಬಂಧವಾಗಿತ್ತೆಂದು ಹೇಳಿಕೊಂಡಿದ್ದಾರೆ. ಶ್ರೀ.ಸಿಂಹರವರು ತಮ್ಮ ವಿದ್ಯಾರ್ಥಿ ಜೀವನವನ್ನು ಮೆಲಕು ಹಾಕುತ್ತಾ ಶ್ರೀ ಸೂಫಿ ಯವರನ್ನು ನೆನಸಿಕೊಳ್ಳುತ್ತಾರೆ – "ಮೊದಲಿಗೆ ಚಿತ್ರಕಲೆಯಲ್ಲಿ ಅಂತಹಹೇಳಿಕೊಳ್ಳುವಂತಹ ಆಸಕ್ತಿಯೇನು ಇರಲಿಲ್ಲ. ಆದರೆ ಮೆಟ್ರಿಕ್ ನಂತರದಲ್ಲಿ ಯಾವದೋ ಪ್ರೇರಣೆಯಿಂದ ಚಿತ್ರ ರಚಿಸುವ ತುಮುಲ ಜಾಗೃತವಾಗಿ, ಚಿತ್ರಕಲಾ ಅಧ್ಯಯನಕ್ಕೆ ಸೇರಿದೆ ಎನ್ನುತ್ತಾರೆ ಸಿಂಹರವರು. ಮನೆಯ ವಾತಾವರಣದಲ್ಲಿ ನಿತ್ಯ ಸಂಧ್ಯಾವಂದನೆ, ವೇದಾಧ್ಯಯನ, ಮಂತ್ರಗಳ ಪಠಣ, ಹೀಗೆ ಬಾಲ್ಯದಲ್ಲಿಯೇ ವೈದಿಕ ಪರಂಪರೆಯ ಪರಿಚಯವಾಗಿ ಅದನ್ನು ದೈವದತ್ತವಾದ ರೀತಿಯಲ್ಲಿ ಜೀವನದಲ್ಲಿ ಅಳವಡಿಸಿಕೊಂಡರು. ಪ್ರಾಯಶಃ ಅವರ ಬಾಲ್ಯದ ಅಧ್ಯಯನಗಳು ನಂತರದಲ್ಲಿನ ಚಿತ್ರ ರಚನೆಗೆ ಜೀವಾಳವಾದವು. ಶ್ರೀ.ಸಿಂಹರವರು ಪ್ರತಿ – ಶನಿವಾರ–ಭಾನುವಾರ ಶ್ರೀ ಸೂಫಿಯವರು ಇದ್ದ ಮಸೀದಿಯ ಹತ್ತಿರದ ರೂಮಿಗೆ ಹೋಗುವುದು, ನಂತರ ಇಬ್ಬರೂ ಕೂಡಿ ಮೈಸೂರಿನ ಸುತ್ತಮುತ್ತಲಿನ ಯಾವುದಾದರು ಒಂದು ಜಾಗಕ್ಕೆ ಹೋಗಿ ಲ್ಯಾಂಡ್ಸಕೇಪ್ ಮಾಡುವುದು– ಅವರ ಎಂದಿನ ವಾಡಿಕೆಯಾಗಿತ್ತು. ಇದರಿಂದಾಗಿ ಸಿಂಹ ಮತ್ತು ಸೂಫಿಯವರ ಮಧ್ಯೆ ಅವಿನಾಭಾವ ಸಂಬಂಧ ವೃದ್ಧಿಯಾಗಿ ಗುರು–ಶಿಷ್ಯ ಪರಂಪರೆಯ ದಾಖಲೆಯಾಯಿತು.

ವಿದ್ಯಾರ್ಥಿದೆಸೆಯಿಂದಲೇ ಪ್ರಾಚೀನ ಕೃತಿಗಳು, ವೇದ–ಉಪನಿಷತ್ತುಗಳು–ಸೂಕ್ತಗಳಿಂದ ಮತ್ತು ಅವುಗಳ ತತ್ವಗಳಿಂದ ಆಕರ್ಷಿತರಾಗಿ ದೇವತಾ ಚಿತ್ರಗಳನ್ನು ಸಿಂಹ ಹೆಚ್ಚಾಗಿ ರಚಿಸುತ್ತಿದ್ದರು. ಜೊತೆಯಲ್ಲಿ ಭಾವಚಿತ್ರ, ವಸ್ತುಚಿತ್ರ, ಪ್ರಕೃತಿ ಚಿತ್ರ, ಹೀಗೆ ಚಿತ್ರ ಕಲೆಯ ವಿವಿಧ ಆಯಾಮಗಳನ್ನು ಅತ್ಯಂತ ಆಸಕ್ತಿಯಿಂದ ಅಭ್ಯಾಸಮಾಡಿ ಕುಶಲತೆ ಮತ್ತು ಕ್ರಿಯಾತ್ಮಕತೆಯಲ್ಲಿ ಸಿದ್ಧಹಸ್ತರಾಗಿದ್ದರು. ಕಲಾಕೃತಿಗಳ ರಚನೆಯಲ್ಲಿ ಸಾಕಷ್ಟು ಪ್ರಾವೀಣ್ಯತೆಯನ್ನು ಗಳಿಸಿ– ತಮ್ಮ ಗುರುಗಳ ಮೆಚ್ಚುಗೆಗೆ ಪಾತ್ರರಾಗಿದ್ದರು. ಶ್ರೀ ಸಿಂಹ ವಿದ್ಯಾರ್ಥಿಯಾಗಿದ್ದಾಗ ಅವರ ಭಾವನವರ ಆಶ್ರಯ ಮತ್ತು ಸಹಾಯವಿದ್ದಿತ್ತು. ಆಗಿನ ಮೈಸೂರು ಸರ್ಕಾರ ನೀಡುತ್ತಿದ್ದ ವಿದ್ಯಾರ್ಥಿವೇತನವು ಶ್ರೀ ಸಿಂಹರಿಗೆ ದೊರೆತಿತ್ತು. ಇದರಿಂದ ಸ್ವಲ್ಪಮಟ್ಟಿನ ಆರ್ಥಿಕ ಸಹಾಯವಾಗಿದ್ದನ್ನು ಸ್ಮರಿಸಿಕೊಳ್ಳುತ್ತಾರೆ. ವಿದ್ಯಾರ್ಥಿಯಾಗಿ ಕಲೆಯನ್ನು ತಪಸ್ಸಿನಂತೆ ಸಿದ್ಧಿಮಾಡಿಕೊಳ್ಳುವ ಅವರ ನಿರಂತರ ಪ್ರಯತ್ನದ ಫಲವಾಗಿ ಅಮೂಲ್ಯ ಕಲಾಕೃತಿಗಳ ರಚನೆಗಳು ಹೊರಹೊಮ್ಮಿವೆ.

ಶ್ರೀ. ಸಿಂಹರವರು ಪ್ರಾಯಶಃ ವಿದ್ಯಾರ್ಥಿದೆಸೆಯಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಪ್ರಭಾವವನ್ನು ಹೊಂದಿದ್ದು ಅವರ ಗುರುಗಳಾದ ಶ್ರೀ ಎಫ್.ಎಂ.ಸೂಫಿಯವರಿಂದ. ಶ್ರೀ ಸೂಫಿಯವರಲ್ಲಿನ ಕಲಾಶ್ರದ್ಧೆ– ಅವರ ಕ್ರಿಯಾತ್ಮಕ

ಮತ್ತು ಅನುಭವಾತ್ಮಕವಾದ ನುಡಿಗಳು ವಿದ್ಯಾರ್ಥಿಗಳನ್ನು ಹೆಚ್ಚು ಹೆಚ್ಚು ಕೆಲಸ ಮಾಡಲು ಹುರಿದುಂಬಿಸುತ್ತಿದ್ದವು. ಶ್ರೀ ಸೂಫಿಯವರನ್ನು ಹುಡುಕಿಕೊಂಡು ಮಾರ್ಗದರ್ಶನ ಪಡೆಯಲು ಮತ್ತು ರಚಿಸಿದ ಕಲಾಕೃತಿಗಳನ್ನು ತೋರಿಸಲು ಅವರಿದ್ದಲ್ಲಿಗೆ ಶ್ರೀ ಸಿಂಹ ಹೋಗುತ್ತಿದ್ದರು. ಪ್ರತಿ ಶನಿವಾರ ಸೂಫ್ಲಿಯವರು ಎಲ್ಲ ಶಿಷ್ಯರನ್ನು ಮೈಸೂರು ಮೃಗಾಲಯಕ್ಕೆ ಕರೆದುಕೊಂಡು ಹೋಗಿ ಅಲ್ಲಿನ ಪ್ರಾಣಿ-ಪಕ್ಷಿಗಳ ಚಿತ್ರ ಬಿಡಿಸಲು ಹೇಳಿ ತಾವೂ ಚಿತ್ರ ರಚಿಸುತ್ತಿದ್ದುದನ್ನು ಶ್ರೀ ಸಿಂಹರವರು ಈಗಲೂ ಮೆಲಕು ಹಾಕುತ್ತಾರೆ. ಸಾಮಾನ್ಯರಲ್ಲಿ ತೀರ ಸಾಮಾನ್ಯ ಕುಟುಂಬದಿಂದ ಬಂದ ಸಿಂಹ ಯಾವತ್ತು ಶ್ರೀಮಂತಿಕೆಯನ್ನು ಬಯಸಲಿಲ್ಲ. ಬದಲಾಗಿ ಹೃದಯ ಶ್ರೀಮಂತಿಕೆ ಅವರಲ್ಲಿ ಜನ್ಮತಃ ತಾನಾಗಿಯೇ ಬಂದಿತ್ತು. ಶ್ರೀ.ಸೂಫಿಯವರು ಹೀಗಾಗಿ ಶ್ರೀ.ಸಿಂಹರವ ಜೀವನದಲ್ಲಿ ಬಹುದೊಡ್ಡ ಪ್ರೇರಣೆಯೂ ಹೌದು ಹಾಗೂ ಅವರ ನೆಚ್ಚಿನ ಅಧ್ಯಾಪಕರೂ ಹೌದು.

ಹೀಗೆ ವಿದ್ಯಾರ್ಥಿಯಾಗಿ, ಕಲಾವಿದನಾಗಲು ಬೇಕಾಗುವ ತಂತ್ರಗಾರಿಕೆಯಲ್ಲಿ ತಯಾರಿ ಪಡೆದರು. ವಿದ್ಯಾರ್ಥಿದೆಸೆಯಿಂದಲೆ ಸಾಕಷ್ಟು ಪ್ರಭಾವಕಾರಿಯಾದ ಚಿತ್ರಗಳ ರಚನೆ ಮಾಡುತ್ತಿದ್ದರು. ಶ್ರದ್ಧೆಯಿಂದ ವಿದ್ಯಾರ್ಜನೆ ಮಾಡಿ ಉತ್ತಮ ವಿದ್ಯಾರ್ಥಿಯಾಗಿದ್ದರು. ಸೂಕ್ಷ್ಮಮತಿಯಾದ ಸಿಂಹರವರು- ರೇಖಾ ಚಿತ್ರ, ಸಂಯೋಜನೆ, ವರ್ಣ ಸಂಯೋಜನೆ ಎಲ್ಲದರಲ್ಲು ಅಚ್ಚುಕಟ್ಟಾಗಿ ವಿದ್ಯಾಗ್ರಹಣಮಾಡಿ ತಮ್ಮ ಅಧ್ಯಾಪಕರಿಂದ ಶಭಾಷ್‌ಗಿರಿ ಪಡೆದವರು.

ಶ್ರೀ ಸಿಂಹರ ಜೀವನದಲ್ಲಿ ಹಲವಾರು ವ್ಯಕ್ತಿಗಳು ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಪ್ರಭಾವ ಬೀರಿದ್ದಾರೆ. ಅವರು ನಂಬುವ ದೈವ-ಮತ್ತು ಆಧ್ಯಾತ್ಮಿಕ ಒಲವು ಅವರನ್ನು ಒಬ್ಬ ಅಪೂರ್ವ ಕಲಾವಿದನನ್ನಾಗಿ ರೂಪಿಸಿವೆ. ಕಲಾವಿದ ಕೆ.ವೆಂಕಟಪ್ಪನವರನ್ನು ಭೇಟಿಯಾದ ಸಂದರ್ಭವು ಕೂಡ ಶ್ರೀ ಸಿಂಹರವರ ಜೀವನದಲ್ಲಿ ಸಾಕಷ್ಟು ಪ್ರಭಾವ ಬೀರಿತೆಂಬ ಮಾತು ಅವರಿಂದಲೇ ದಾಖಲಾಗಿದೆ. ಒಂದು ರೀತಿಯಲ್ಲಿ ಅವರ ಕಲಾ ಧ್ಯಾನದಲ್ಲಿ ವಿಶೇಷವಾದ ಒತ್ತನ್ನುನೀಡಿದ್ದನ್ನು ಸಿಂಹರವರು ಸ್ಮರಿಸಿಕೊಳ್ಳುತ್ತಾರೆ. ಚಾಮರಾಜೇಂದ್ರ ತಾಂತ್ರಿಕ ಶಾಲೆಯಲ್ಲಿ ವಿದ್ಯಾಭ್ಯಾಸಮುಗಿದ ಸಂದರ್ಭದಲ್ಲಿ ಶ್ರೀ ಸಿಂಹ ಅವರ ಸ್ನೇಹಿನೊಂದಿಗೆ ಸೇರಿ ಕೆ.ವೆಂಕಟಪ್ಪನವರನ್ನು ಭೇಟಿಮಾಡಲು ಬೆಂಗಳೂರಿಗೆ ಹೋಗಿದ್ದರು. ವೆಂಕಟಪ್ಪನವರಿಗೆ ಆಗ ಅನಾರೋಗ್ಯ. ಅಂತಹ ವಿಷಮ ಸ್ಥಿತಿಯಲ್ಲೂ ಅವರು ಚಿತ್ರ ರಚನೆಯನ್ನು ಮಾಡುತ್ತಿದ್ದುದನ್ನು ಶ್ರೀ ಸಿಂಹ ಗಮನಿಸಿದ್ದಾರೆ. ಅವರು ಆಗಷ್ಟೆ ಸೂರ್ಯ ಅಸ್ತಂಗತನಾಗುವಂತಹ ದೃಶ್ಯವಿರುವ ಚಿತ್ರವೊಂದನ್ನು ರಚಿಸುತ್ತಿದ್ದರು. ಅದು ಸಂಪೂರ್ಣವಾಗಿರಲಿಲ್ಲ. ಶ್ರೀ.ಸಿಂಹರವರು ಗಮನಿಸಿರುವಂತೆ ಆ ಚಿತ್ರವು ಪ್ರಾಯಶಃ ವೆಂಕಟಪ್ಪನವರ ಕೊನೆಯ ಚಿತ್ರವೂ ಆಗಿರಬಹುದೆಂದು ತೋರುತ್ತದೆ. ಚಿತ್ರದಲ್ಲಿನ ಸಂಯೋಜನೆಯು ಸಾಂಕೇತಿಕವಾಗಿ ಸೂರ್ಯ ಅಸ್ತಂಗತನಾಗುವುದನ್ನು ತಮ್ಮ ಕೊನೆಯ ಕಾಲವೆಂಬಂತೆ ವೆಂಕಟಪ್ಪನವರು ಈ ಚಿತ್ರವನ್ನು ರಚಿಸಿದ್ದನ್ನು ಶ್ರೀ ಸಿಂಹ ಸ್ಮರಿಸುತ್ತಾರೆ. ಅಂದರೆ ವೆಂಕಟಪ್ಪನವರ ಕಲೆ ಮತ್ತು ಅವರಲ್ಲಿನ ಕಲಾವಿದ ಸೂರ್ಯನಷ್ಟೆ ಪ್ರಖರ ಎಂಬ ಗೂಢಾರ್ಥ. ಅವರನ್ನು ಭೇಟಿ ಮಾಡಿದ ಮುಂದೆ ಕೆಲವು ಕಾಲದಲ್ಲಿಯೇ ಕಲಾವಿದ ವೆಂಕಟಪ್ಪ ಅಸ್ತಂಗತರಾಗುತ್ತಾರೆ. ಇಂದಿಗೂ ವೆಂಕಟಪ್ಪನವರ ಭೇಟಿ ಮತ್ತು ಅವರು ಅಂದು ಆಡಿದ ಮಾತು ಶ್ರೀ ಸಿಂಹರ ಮನದಲ್ಲಿ ಹಸಿರಾಗಿದೆ. ಅಂದು ವೆಂಕಟಪ್ಪನವರು, ಸಿಂಹರನ್ನು ಕುರಿತಂತೆ- 'ಏನಯ್ಯಾ ನೀನ್ಯಾಕೆ ಚಿತ್ರಕಲೆಯನ್ನ ಆರಿಸ್ಕೊಂಡೆ' ಎಂದು ಕೇಳಿದರಂತೆ. ಅದಕ್ಕೆ ಸಿಂಹರವರು ನೀಡಿದ ಉತ್ತರ ಅತ್ಯಂತ ಮಾರ್ಮಿಕವಾಗಿದೆ. 'ನಾನು ಆರಿಸ್ಕೊಳ್ಳಿಲ್ಲ- ಅದೇ ಅರಸ್ಕೊಂಡು ಬಂತು' ಎಂದು ಸಿಂಹ ಹೇಳಿದ್ದಕ್ಕೆ ವೆಂಕಟಪ್ಪನವರು 'ಹಾಗಾದರೆ ಅನುಭವಿಸು' ಎಂದು ಹೇಳಿ ಕಳುಹಿಸಿದರಂತೆ. ವೆಂಕಟಪ್ಪನವರ ಆ ನುಡಿಗಳು ಶ್ರೀ ಸಿಂಹರ ಜೀವನದಲ್ಲಿ ಮತ್ತು ಕಲಾಕೃತಿಗಳಲ್ಲಿ ಸಾಕಷ್ಟು ಪ್ರಭಾವ ಬೀರಿರುವುದನ್ನು ಗಮನಿಸಬಹುದು.



ಶ್ರೀ ವೈಭವಲಕ್ಷ್ಮೀ. ೧೯೯೪
ಕಾಗದದ ಮೇಲೆ ಪೋಸ್ಟರ್ ಬಣ್ಣ ೪೧ ೫೧ ಸೆ ಮೀ.
ಸಂಗ್ರಹ: ಶ್ರೀಮತಿ ಭಾನುಮತಿ ದೇವಿ, ಮೈಸೂರು

SRI VAIBHAVA LAKSHMI. 1994
Poster colours on paper. 41x51 cms
Collection: Smt. Bhanumati Devi, Mysuru







ಆರಂಭಿಕ ರೇಖಾಚಿತ್ರಗಳು
ಪೆನ್ ಮತ್ತು ಕಾಗದ. ವಿವಿಧ ಅಳತೆಗಳು.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

INITIAL SKETCHES
Pen on paper. Various sizes
Collection: Ramsons Kala Pratishtana, Mysuru

ಪೀತಾಂಬರ ಬಹಿರಿ ಪಿಡ್ಡನಾಯಕ



ಮೇಲೆ: ಪೀತಾಂಬರ ಬಹಿರಿ ಪಿಡ್ಡನಾಯಕ – ಪುಸ್ತಕದ ಕಥಾನಕ ಚಿತ್ರ
ಕೆಳಗೆ: ಗಣೇಶ – ಏಕವರ್ಣ ಚಿತ್ರಪಟ
ಮುದ್ರಿತ ಕಾಗದ. ವಿವಿಧ ಅಳತೆಗಳು.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

Top: PITAMBARA BAHIRI PIDDA NAYAKA - Text book illustration
Bottom: GANESHA - Monochrome print
Printed paper. Various sizes
Collection: Ramsons Kala Pratishtana, Mysuru










ಕಾದಂಬರಿಗಳ ರಕ್ಷಾಪುಟಗಳ ಚಿತ್ರಗಳು.
ಸುಮಾರು ೧೯೭೦ರ ದಶಕದಿಂದ ೧೯೯೦ ದಶಕ
ಮುದ್ರಿತ ಕಾಗದ. ೧೨-೧೮ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

**Cover illustrations of novels**
**Probably 1970s to 1990s**
Printed paper. 12x18 cms
Collection: Ramsons Kala Pratishtana, Mysuru

# 3 ಕಲಾಕೃಷಿ-ಉದ್ಯೋಗ

ಶ್ರೀ ಸಿಂಹ 1959 ರಲ್ಲಿ ಜಿಡಿ ಆರ್ಟ್ಸ್ ಡಿಪ್ಲೊಮೊ ಪದವಿಯನ್ನು ಉತ್ತಮ ಶ್ರೇಣಿಯಲ್ಲಿ ಪಡೆದರು. ನಂತರ ಅವರು ಹಲವಾರು ಕಡೆಗಳಲ್ಲಿ ಕಲಾವಿದರಾಗಿ ಕೆಲಸ ಮಾಡಿದ್ದಾರೆ. 1962ರಿಂದ 'ತಾಯಿನಾಡು' ಪತ್ರಿಕೆಯಲ್ಲಿ ಕಲಾವಿದರಾಗಿ ಕೆಲಸಮಾಡಿದ್ದಾರೆ. ಆಗ ಖ್ಯಾತ ಪತ್ರಿಕೋದ್ಯಮಿಯಾಗಿದ್ದ ಖಾದ್ರಿ ಶಾಮಣ್ಣನವರ ಪ್ರೋತ್ಸಾಹ ಹಾಗೂ ಮಾರ್ಗದರ್ಶನ ದೊರೆಯುತ್ತಿತ್ತು. ಖಾದ್ರಿಯವರ ಸಂಪಾದಕತ್ವದಲ್ಲಿ ಪ್ರಕಟವಾಗುತ್ತಿದ್ದ ವಾರಪತ್ರಿಕೆ– 'ಗೋಕುಲ' ಹಾಗೂ ಮಾಸಪತ್ರಿಕೆ 'ಕೈಲಾಸ' ಇವೆರಡರಲ್ಲೂ ಕಲಾವಿದರಾಗಿ ಸಿಂಹ ಕಾರ್ಯನಿರ್ವಹಿಸಿದರು. ಆ ಕಾಲದಲ್ಲಿ ಖ್ಯಾತ ಕಲಾವಿದರು ಮತ್ತು ಪತ್ರಿಕೆಗಳಿಗೆ ರೇಖಾಚಿತ್ರಗಳ ರಚನೆಯಲ್ಲಿ ನಿಷ್ಣಾತರಾಗಿದ್ದ ಶ್ರೀ ಎಂ.ಟಿ.ವಿ.ಆಚಾರ್ಯರವರ ಪರಿಚಯವಾಯಿತು. ಹಿರಿಯರಾದ ಆಚಾರ್ಯರ ಮಾರ್ಗದರ್ಶನದಲ್ಲಿ ಸಿಂಹರವರು ತಮ್ಮ ರೇಖಾ ಚಿತ್ರಗಳಲ್ಲಿನ ವಿನ್ಯಾಸಗಳನ್ನು ಸಾಕಷ್ಟು ಉನ್ನತೀಕರಿಸಿಕೊಂಡು ಪ್ರಬುದ್ಧ ಕಲಾವಿದರಾಗಿ ಹೊರಹೊಮ್ಮಿದರು. ಪತ್ರಿಕೆಗಳಿಗೆ ಬೇಕಾಗುವ ವಿನ್ಯಾಸಗಳ ಆಂತರ್ಯವನ್ನು ಅರಿತು ಗಟ್ಟಿಯಾದ ಪ್ರೌಢಿಮೆ ಸಾಧಿಸಿದರು. ಆ ಕಾಲದಲ್ಲಿ ಪತ್ರಿಕೆಗಳು, ಛಾಯಾಚಿತ್ರಗಳ ಬದಲಾಗಿ ರೇಖಾವಿನ್ಯಾಸದ ಸಂಯೋಜನೆಗಳನ್ನೇ ಅಧಿಕವಾಗಿ ಉಪಯೋಗಿಸುತ್ತಿದ್ದವು. ಪತ್ರಿಕೆಗಳಿಗೆ ಅಂದವಾಗಿ, ಆಕರ್ಷಕವಾಗಿ ಮತ್ತು ಅರ್ಥಪೂರ್ಣವಾಗಿ ಚಿತ್ರ ರಚಿಸುವ ಕಲಾವಿದರಿಗೆ ವಿಶೇಷವಾದ ಬೇಡಿಕೆ ಇದ್ದಿತ್ತು. ಶ್ರೀ ಸಿಂಹರವರು ಸಹಜವಾಗಿ ಸುಂದರವಾಗಿ ಮತ್ತು ಪ್ರೌಢವಾಗಿ ಚಿತ್ರ ರಚಿಸುತ್ತಿದ್ದುದರಿಂದ ಅವರಿಗೆ ಪತ್ರಿಕೆಯಲ್ಲಿನ ಕಲಾವಿದನ ಕೆಲಸ ಸವಾಲೆನಿಸಲಿಲ್ಲ. ಶ್ರೀ. ಎಂ.ಟಿ.ವಿ.ಆಚಾರ್ಯರಂತಹ ಕಲಾವಿದರ ಮಾರ್ಗದರ್ಶನ ದೊರೆತಮೇಲೆ ಮತ್ತಷ್ಟು ವಿಶಿಷ್ಟತೆಗಳನ್ನು ತಮ್ಮ ರಚನೆಗಳಲ್ಲಿ ಅಳವಡಿಸಿಕೊಂಡರು.

4

# ಶ್ರೀ ಎಂ.ಬಿ.ಸಿಂಗ್ ಸಂಪರ್ಕ ಮತ್ತು ಮಾರ್ಗದರ್ಶನ

1960 ರ ದಶಕದಲ್ಲಿ, ಪ್ರಜಾವಾಣಿ ಪತ್ರಿಕಾ ಬಳಗದ ಸುಧಾ ಮತ್ತು ಮಯೂರ ವಾರ ಮತ್ತು ಮಾಸಿಕ ಪತ್ರಿಕೆಗಳು ಜನಪ್ರಿಯವಾಗತೊಡಗಿದ್ದವು. ಅವುಗಳ ಸಂಪಾದಕರಾಗಿದ್ದ–ಖ್ಯಾತ ಪತ್ರಕರ್ತ ಶ್ರೀ ಎಂ.ಬಿ. ಸಿಂಗ್‌ರವರು ಶ್ರೀ ಸಿಂಹರವರನ್ನು ಕಲಾವಿದರಾಗಿ ತಮ್ಮ ಪತ್ರಿಕಾ ಸಮೂಹಕ್ಕೆ ಆರಿಸಿಕೊಂಡರು. ಅವರ ಮಾರ್ಗದರ್ಶನದಲ್ಲಿ ಮತ್ತು ಆಹ್ವಾನದ ಮೇರೆಗೆ ಪ್ರಜಾವಾಣಿ ಬಳಗವನ್ನು 1960 ದಶಕದ ಮಧ್ಯದಲ್ಲಿ ಶ್ರೀ ಸಿಂಹರವರು ಸೇರಿದರು. ಎಂ.ಬಿ.ಸಿಂಗ್ ಅವರ ಪ್ರೋತ್ಸಾಹ ಮತ್ತು ಮಾರ್ಗದರ್ಶನದಲ್ಲಿ ಯುವಕರಾಗಿದ್ದ ಶ್ರೀ ಸಿಂಹರವರು ಅತ್ಯುತ್ತಮವಾದ ಚಿತ್ರಗಳನ್ನು ಪ್ರಜಾವಾಣಿ ಸಮೂಹಕ್ಕೆ ರಚಿಸಿದರು. ಅಲ್ಲಿಯೂ ತಮ್ಮದೇ ಆದ ಶೈಲಿಯಿಂದ ಕಲಾವಿದರಾಗಿ ಸೈ ಎನಿಸಿಕೊಂಡರು. ತಮ್ಮ ಕಚೇರಿ ಸಮಯ ಮುಗಿದಮೇಲೂ ಶ್ರೀ ಸಿಂಹ ಹೆಚ್ಚಿನ ಹೊತ್ತು ಅಲ್ಲಿಯೇ ಕೆಲಸ ಮಾಡಿ ಪತ್ರಿಕೆಗಳಿಗೆ ಬೇಕಾದ ಚಿತ್ರಗಳನ್ನು ಬಹು ಶ್ರದ್ಧೆಯಿಂದ ರಚಿಸಿಕೊಡುತ್ತಿದ್ದರು. ಅವರ ಕಾರ್ಯ ವೈಖರಿ ಎಂಥವರನ್ನು ಮೆಚ್ಚಿಸುತ್ತಿತ್ತು. ಪತ್ರಿಕೆಗಳಿಗೆ, ಪುಸ್ತಕಗಳಿಗೆ, ವಾರ ಮತ್ತು ಮಾಸಿಕ ಪತ್ರಿಕೆಗಳಿಗೆ ರಕ್ಷಾಪುಟಗಳನ್ನು ರಚಿಸುತ್ತಿದ್ದರು ಹೀಗಾಗಿ ಎಂ.ಬಿ.ಸಿಂಗರ ಪ್ರೀತಿಗೆ ಶ್ರೀಸಿಂಹ ಬಹುಬೇಗ ಪಾತ್ರರಾದರು. ಕಲಾವಿದನಾಗಿ ಶ್ರೀ.ಸಿಂಹರವರಲ್ಲಿ ಒಂದು ವಿಶಿಷ್ಟವಾದ ವ್ಯಕ್ತಿತ್ವ ವಿಕಸನವಾಗುತ್ತಿತ್ತು. ಅದೇ ಅತ್ಯಂತ ಸೂಕ್ಷ್ಮ – ಸ್ವಾಭಿಮಾನಿ ಸ್ವಭಾವ ಹಾಗೂ ಶೀಘ್ರ ಕೋಪಿಯೂ ಹೌದು. ಅಚ್ಚುಕಟ್ಟುತನವನ್ನು ಅವರ ಜೀವನದ ಎಲ್ಲ ಭಾಗದಲ್ಲೂ ನೋಡಬಹುದು. ತಮ್ಮ ಎಲ್ಲ ಕೆಲಸಗಳಲ್ಲಿ ಹಾಗೂ ಚಿತ್ರ ರಚನೆಯಲ್ಲಿ ಬಳಕೆಯಾಗುವ ಬ್ರಶ್, ಬಣ್ಣಗಳ ಉಪಯೋಗ

ಮತ್ತು ಜೋಡಣೆ ಹಾಗೂ ಅವರ ಪೋಷಾಕುಗಳು, ಜೀವನ ಶೈಲಿ ಹೀಗೆ ಎಲ್ಲದರಲ್ಲೂ ಅಚ್ಚುಕಟ್ಟು. ತಮ್ಮ ಕೆಲಸದಲ್ಲಿ ಯಾವುದೇ ಲೋಪ ಬರದಂತೆ- ನಿಗದಿತ ಸಮಯದಲ್ಲಿಯೇ ಕಲಾರಚನೆ ಮಾಡಿಕೊಡುವುದು ಅವರ ಸ್ವಭಾವ. ತಮ್ಮಿಂದ ಯಾರಿಗೂ ತೊಂದರೆ ಆಗಬಾರದೆಂಬುದು ಅವರ ಜೀವನದ ನಂಬಿಕೆ. ಪ್ರಾಯಶಃ ಅದನ್ನು ಇಂದಿಗೂ ನಂಬಿಕೊಂಡು ಅತ್ಯಂತ ಸ್ವಾಭಿಮಾನಿಯಾಗಿ ಬದುಕನ್ನು ಶ್ರೀ ಸಿಂಹರವರು ನಡೆಸಿದ್ದಾರೆ. ಪ್ರಜಾವಾಣಿ ಸಮೂಹದಲ್ಲಿ ಶ್ರೀ ಸಿಂಹ ಹೆಚ್ಚುಕಾಲ ನಿಲ್ಲಲಿಲ್ಲ. ಅವರ ಸಹೋದ್ಯೋಗಿಗಳ ಕಿರುಕುಳ-ಅಸೂಯೆಗಳಿಂದಾಗಿ- ಸ್ವಾಭಿಮಾನಿಯಾದ ಶ್ರೀ.ಸಿಂಹ ಚೆನ್ನಾಗಿ ಸಂಬಳಬರುತ್ತಿದ್ದ ಪತ್ರಿಕೆಯ ಕೆಲಸವನ್ನು ತೊರೆದು ಮೈಸೂರಿಗೆ ಮರಳಿದರು. ಬಹುಶಃ ಅವರು ಇನ್ನು ಕೆಲವು ಕಾಲ ಪತ್ರಿಕೆಯಲ್ಲಿಯೇ ನಿಂತಿದ್ದರೆ, ಪತ್ರಿಕಾ ಕಲಾವಿದರಲ್ಲಿ ಅನಭಿಷಕ್ತ ಕಲಾವಿದರಾಗುತ್ತಿದ್ದರು. ಪತ್ರಿಕೆಯಲ್ಲಿ ಕಲಾವಿದರಾಗಿದ್ದಾಗ ಆ ಮಾಧ್ಯಮದ ಆಂತರ್ಯವನ್ನು ಅರಿತವರು. ಅದರಿಂದಾಗಿ ಚಿತ್ರ ರಚನೆಯಲ್ಲಿ ಅಂದಿನ ಸಮಕಾಲೀನ ಸನ್ನಿವೇಶಗಳನ್ನು ಅಳವಡಿಸಿಕೊಂಡರು. ಮುದ್ರಣ ಮಾಧ್ಯಮದ ಇತಿಮಿತಿಗಳನ್ನು ತಿಳಿದು- ಅದರ ವಿಸ್ತಾರದಲ್ಲಿಯೇ ಚಿತ್ರಗಳನ್ನು ರಚಿಸುತ್ತಿದ್ದರು. ಮುದ್ರಣ ಮಾಧ್ಯಮದಿಂದಾಗಿ ಪತ್ರಿಕೆಗಳು ಸಾರ್ವಜನಿಕರ ಮುಂದೆ ಹೋಗುತ್ತಿದ್ದವು. ಹೀಗಾಗಿ ಜನ ಸಾಮಾನ್ಯರು ಮೆಚ್ಚಬಹುದಾದ ರೀತಿಯಲ್ಲಿ ಅರ್ಥವಂತಿಕೆಯನ್ನು ಮತ್ತು ಚಿತ್ರಗಳನ್ನು ಸರಳೀಕರಣಗೊಳಿಸುವುದನ್ನು ಅವರು ಕರಗತಮಾಡಿಕೊಂಡಿದ್ದಾರೆ. ಪ್ರಜಾವಾಣಿ ಸಮೂಹದಲ್ಲಿ ಅವರು ಇದ್ದಷ್ಟು ಕಾಲದಲ್ಲಿ ತಮ್ಮಿಂದಾದ ಅತ್ಯುತ್ತಮವಾದ ಚಿತ್ರಗಳನ್ನೇ ಅವರು ಮಾಡಿದ್ದಾರೆ. ಪತ್ರಿಕೆಯನ್ನು ಬಿಟ್ಟನಂತರದ ಜೀವನ ಸ್ವತಂತ್ರ ಕಲಾವಿದನ ಜೀವನ(ಫ್ರೀಲ್ಯಾನ್ಸ್- ಆರ್ಟಿಸ್ಟ್). ಮೈಸೂರು ಮುಂದಿನ ಎರಡು ದಶಕಗಳ ಕಾಲ ಅವರ ಕಾರ್ಯ ಕ್ಷೇತ್ರವಾಯಿತು.



*ದಿ॥ ಎಂ.ಬಿ. ಸಿಂಗ್ ಅವರೊಂದಿಗೆ ಸಮಾಲೋಚನೆಯಲ್ಲಿರುವ ಶ್ರೀ ಜಿ.ಎಲ್.ಎನ್. ಸಿಂಹ. 5-2-2011. ಬೆಂಗಳೂರು*

# 5 ಗ್ರಹಸ್ಥಾಶ್ರಮ-ಕಲಾಕೃಷಿ

1969 ಸಿಂಹರವರು ಗ್ರಹಸ್ಥಾಶ್ರಮಕ್ಕೆ ಕಾಲಿಟ್ಟ ವರ್ಷ. ಶ್ರೀಮತಿ ಶೇಷಮ್ಮ(ಪ್ರೇಮಾ) ಅವರ ಬಾಳ ಸಂಗಾತಿಯಾದರು. ಶ್ರೀ ಸಿಂಹರ ಜೊತೆಗಾತಿಯಾದ ಶ್ರೀಮತಿ ಶೇಷಮ್ಮ ನಂಜನಗೂಡಿನ ಹತ್ತಿರದ ಕಳಲೆಯ ಶ್ರೀಲಕ್ಷ್ಮೀಕಾಂತ ಸ್ವಾಮಿ ದೇವರ ಅರ್ಚಕ ಮನೆತನದವರು. ಮೂಲತಃ ತಮಿಳು ಅಯ್ಯಂಗಾರ ಮನೆತನದವರಾಗಿದ್ದರಿಂದ ಸಹಜವಾಗಿ ಸಂಸ್ಕೃತ ಜ್ಞಾನ- ಸಹಬಾಳ್ವೆ ಅವರಲ್ಲಿ ರಕ್ತಗತವಾಗಿ ಬಂದಿದೆ. ಬಹುಶಃ ಪತಿಯೇ ಪರದೈವ ಎಂಬ ಮಾತುಗಳನ್ನು ಈಗಲೂ ಅವರು ಸಿದ್ಧ ಮಾಡಿತೋರಿಸುತ್ತಿದ್ದಾರೆ. ಅತ್ಯಂತ ಸಮಚಿತ್ತದ ಸಹಧರ್ಮಿಣಿಯಾದ ಶ್ರೀಮತಿ ಶೇಷಮ್ಮ ಮತ್ತು ಶ್ರೀ ಸಿಂಹ ದಂಪತಿಗಳಿಗೆ ಒಬ್ಬ ಮಗ(ರವಿ) ಹಾಗೂ ಮಗಳಿದ್ದಾರೆ(ರೂಪಾ). ಸಿಂಹ-ಶೇಷಮ್ಮ ದಂಪತಿಗಳು ಜೊತೆಯಾದ ವರ್ಷವೇ ಸಿಂಹರವರು ಸ್ವತಂತ್ರ ಕಲಾವಿದರಾಗಿರಲು ಬಯಸಿ ಬೆಂಗಳೂರಿನಲ್ಲಿಯ ಪ್ರಜಾವಾಣಿ ಕೆಲಸಕ್ಕೆ ತಿಲಾಂಜಲಿಯನ್ನಿಟ್ಟರು. ಅವರ ಜೀವನೋಪಾಯಕ್ಕಾಗಿ ಸ್ವತಂತ್ರವಾಗಿ ವಿಭಿನ್ನ ಬಗೆಯ ಚಿತ್ರಗಳ ರಚನೆಯಲ್ಲಿ ತೊಡಗಿದ್ದರು. ಮುಖ್ಯವಾಗಿ ಪುಸ್ತಕಗಳಿಗೆ ರಕ್ಷಾಪುಟಗಳ ಕಲಾತ್ಮಕವಾದ ರಚನೆ, ಭಾವಚಿತ್ರಗಳ ರಚನೆ, ಮಠಮಾನ್ಯಗಳು ಬಯಸುವಂತಹ ಚಿತ್ರಗಳ ರಚನೆ-ಹೀಗೆ ಹಲವಾರು ವೈವಿಧ್ಯಮಯವಾದ ಚಿತ್ರಗಳನ್ನು ನಿರಂತರವಾಗಿ ರಚನೆ ಮಾಡಿದ್ದಾರೆ. ಪ್ರಾಯಶಃ ಮೈಸೂರಿನಲ್ಲಿಯ ಜೀವನದ ಕಷ್ಟ- ಜನನಿಬಿಡತೆಗಳು ಅವರ ಕಲಾರಚನೆಗೆ ಪೂರಕವಾಗಿರಲಿಲ್ಲವೆಂದು ತೋರುತ್ತವೆ, ಕಳಲೆ ಗ್ರಾಮವು ಅವರ ಪತ್ನಿಯವರ ಗ್ರಾಮವಾಗಿದ್ದು ವಾಸಕ್ಕೆ ಸೂರು, ಅಲ್ಲಿನ ಪ್ರಶಾಂತ ವಾತಾವರಣ, ಅವರಲ್ಲಿನ ಕಲಾತಪಸ್ಸಿಗೆ ಪೂರಕವೂ ಆಗಿದ್ದುದರಿಂದ 1991

ರಿಂದ ಕಳಲೆಗೆ ವಾಸಕ್ಕೆಹೋಗಿ ಅಲ್ಲಿಯೇ ನೆಲೆನಿಂತರು. ಅಂದಿನಿಂದ ಇಂದಿನವರೆಗೂ ಕಳಲೆಯಲ್ಲಿಯೇ ತಮ್ಮ ಕಲಾ ಕೃಷಿಯಲ್ಲಿ ಶ್ರೀ. ಸಿಂಹರವರು ತೊಡಗಿದ್ದಾರೆ. ಶ್ರೀ ಸಿಂಹ ಕಳಲೆಗೆ ಹೋದ ಸಂದರ್ಭದ ಆರಂಭದಲ್ಲಿ ಅವರ ಕಲಾ ರಚನೆಗಳಿಗೆ ಸ್ಫೂರ್ತಿಯ ನೀರೆರೆದವರು, ಕಳಲೆಯ ಅರಸು ಮನೆತನದ ಕಲಾಪೋಷಕಿ ಶ್ರೀಮತಿ ಭಾನುಮತಿದೇವಿಯವರು. ಪ್ರಸ್ತುತ ಮೈಸೂರಿನಲ್ಲಿ ವಾಸವಾಗಿದ್ದಾರೆ. ಶ್ರೀಮತಿ ಭಾನುಮತಿದೇವಿಯವರು ಕಳಲೆಯ ಶ್ರೀ ಸೋಮೇಶ್ವರದೇವಸ್ಥಾನದ ಟ್ರಸ್ಟಿಗಳಲ್ಲೊಬ್ಬರು. ಆರಂಭದಲ್ಲಿ ಶ್ರೀ ಸಿಂಹ ಅವರಿಗೆ ತಾನು ಬಯಸಿದ ಚಿತ್ರಗಳ ರಚನೆಗೆ ಸಹಕಾರಿಯಾಗಿ ಉತ್ತೇಜನ ನೀಡಿದರು. ಈ ಸಂದರ್ಭದಲ್ಲಿ ಕಳಲೆಯ ಬಗ್ಗೆ ಸ್ವಲ್ಪದರಲ್ಲಿ ಹೇಳಬೇಕು.

ಮೈಸೂರಿನ ಹಲವಾರು ಮಹಾರಾಜರ ರಾಣಿಯರು ಕಳಲೆಯವರೆ ಆಗಿದ್ದಾರೆ. ಅವರಿಗೆ ಕಳಲೆ ತವರುಮನೆ. ವಿಶೇಷವಾಗಿ ಕಳಲೆಯ ಅರಸು ಮನೆತನವು ಮೈಸೂರು ಇತಿಹಾಸದಲ್ಲಿ ಬಹು ಮುಖ್ಯವಾದ ಪಾತ್ರವಹಿಸಿದೆ. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ರಾಜ್ಯ ವಹಿಸಿಕೊಳ್ಳುವಮೊದಲು ಕಳಲೆಯ ನಂಜರಾಜಯ್ಯ ಮೊದಲಾದವರು ಮೈಸೂರು ರಾಜ್ಯದ ದಳವಾಯಿಗಳಾಗಿ, ರಾಜ್ಯಾಡಳಿತದಲ್ಲಿ ಅಧಿಕಾರನಡೆಸಿದ್ದಾರೆ. ಕಳಲೆಯ ನಂಜರಾಜಯ್ಯ ಒಬ್ಬ ವಿದ್ವಾಂಸರು ಸಹ ಆಗಿದ್ದನ್ನು ಇತಿಹಾಸದ ಪುಟಗಳಿಂದ ಅರಿಯಬಹುದು. ಮುಮ್ಮಡಿ ಕೃಷ್ಣರಾಜ ಒಡೆಯರವರ ತಾಯಿ ಕಳಲೆಯ ಅರಸುಮನೆತನದವರಾಗಿದ್ದರು. ಕಳಲೆಯ ಶ್ರೀ ಲಕ್ಷ್ಮೀಕಾಂತಸ್ವಾಮಿ ಕ್ಷೇತ್ರಾಧಿಪತಿಯಾಗಿದ್ದರೆ, ಇಲ್ಲಿನ ಶ್ರೀ ಸೋಮೇಶ್ವರ ದೇವಸ್ಥಾನ ಅರಸು ಮನೆತನದವರ ಆರಾಧ್ಯ ದೈವವಾಗಿದೆ. ಅಲ್ಲದೇ ಇಲ್ಲಿನ ಶ್ರೀ ಕೈವಲ್ಯಾದೇವಿಯು ಅರಸು ಮನೆತನದವರ ಆರಾಧ್ಯ ದೇವತೆಯಾಗಿದೆ. ಕಳಲೆಗ್ರಾಮವು ತನ್ನ ಐತಿಹಾಸಿಕತೆಯ ಜೊತೆಗೆ ವಿಜಯನಗರೋತ್ತರ ಕಾಲದ ವಾಸ್ತು-ಶಿಲ್ಪಕ್ಕೂ ಹೆಸರಾಗಿದೆ.

**ಕಲಾ ರಚನೆಗಳು:**

ಶ್ರೀ.ಜಿ.ಎಲ್.ಎನ್.ಸಿಂಹ ತಮ್ಮ ಜೀವನದುದ್ದಕ್ಕೂ ಸಾಕಷ್ಟು ಕಲಾಕೃತಿಗಳನ್ನು ರಚನೆಮಾಡಿದ್ದಾರೆ. ಕಲಾಕೃತಿಗಳ ವಸ್ತುವಿನ್ಯಾಸಗಳಲ್ಲಿ ಸಾಕಷ್ಟು ವೈವಿಧ್ಯತೆಗಳಿರುವುದನ್ನು ಗಮನಿಸಬಹುದು. ವಿಷಯನಿರೂಪಣೆ-ಸಂಯೋಜನೆ ಹಾಗೂ ವರ್ಣವಿನ್ಯಾಸಗಳಲ್ಲಿ ಶ್ರೀ ಸಿಂಹ ತಮ್ಮದೇ ಆದಂತಹ ಶೈಲಿಯನ್ನು ಮತ್ತು ತಾಂತ್ರಿಕತೆಯನ್ನು ಪ್ರಚುರಪಡಿಸಿದ್ದಾರೆ. ಅವರ ಕಲಾಜೀವನದ ಅತ್ಯಂತ ಪ್ರೌಢವೂ ಹಾಗೂ ಪ್ರಾಯಶಃ ಕಲಾವಿದನಾಗಿ ತಮಗೆ ಅತ್ಯಂತ ಪ್ರಿಯವೂ ಆಗಿರುವ ಕಲಾಕೃತಿಗಳು 1999ರ ನಂತರದಲ್ಲಿ ರಚನೆಯಾಗಿವೆ. ಈ ಮೊದಲು ರಚಿಸಿದ ಚಿತ್ರಗಳು ಅಂದಿನ ಆಸಕ್ತರ ಕೋರಿಕೆಯ ಮೇರೆಗೆ ರಚನೆಯಾದ ಚಿತ್ರಗಳಾಗಿದ್ದವು. ಪ್ರಾಯಶಃ ಅವರು ಕಳಲೆಗೆ ಹೋಗಿ ನೆಲೆನಿಂತಮೇಲೆ ತಮ್ಮ ಮನದಾಳದಲ್ಲಿ ಅಡಗಿದ್ದ ಆಧ್ಯಾತ್ಮಿಕ ದರ್ಶನ ಶಾಸ್ತ್ರಕ್ಕೆ ಪೂರಕವಾದ ರಚನೆಗಳು ಪ್ರಾರಂಭಗೊಂಡು ಅದ್ಭುತ ಕಲಾಕೃತಿಗಳು ಹೊರಹೊಮ್ಮಿದವು. ಆ ಚಿತ್ರಗಳು ಕಲಾವಿದನ ಪರಿಕಲ್ಪನೆ ಹಾಗೂ ಕ್ರಿಯಾತ್ಮಕ ಅಭಿವ್ಯಕ್ತಿಯ ನಿದರ್ಶನಗಳಾಗಿವೆ.

ಕಲಾಕೃತಿಯೊಂದು, ಕಲಾವಿದನ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಕಲಾವಿದನ ಜೀವನ ಶೈಲಿ- ನಂಬಿಕೆ ಮತ್ತು ನಡೆದುಬಂದ ದಾರಿ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಸೂಚಿಸುತ್ತದೆ. ಶ್ರೀ ಜಿ.ಎಲ್.ಎನ್.ಸಿಂಹ ರವರ ಒಟ್ಟಾರೆ ಕಲಾಕೃತಿಗಳ ಅವಲೋಕನ ಮಾಡಿದಾಗ, ವೈವಿಧ್ಯಮಯವಾದಂತಹ ಕಲಾಕೃತಿಗಳನ್ನು ಅವರು ರಚನೆ ಮಾಡಿರುವುದು ಕಂಡುಬರುತ್ತದೆ. ಮದುವೆಯ ನಂತರದ ಶ್ರೀ ಸಿಂಹ ಅವರ ಕಲಾ ಜೀವನ ಸಾಕಷ್ಟು ಏರುಪೇರುಗಳಿಂದ ಕೂಡಿತ್ತು. ಒಂದೆಡೆ ಮನೆತನ ನಡೆಸುವ ಜವಾಬ್ದಾರಿ- ಕಲಾಕೃತಿಗಳ ರಚನೆಗೆ ಪೂರಕವಾದ ವಾತಾವರಣ ನಿರ್ಮಾಣಮಾಡಿಕೊಳ್ಳುವುದು- ಸಂಸಾರ ನಡೆಸಲು ಆರ್ಥಿಕತೆಯ ಮುಗ್ಗಟ್ಟು, ಹೀಗೆ ಪ್ರತಿಯೊಂದು ಹಂತದಲ್ಲಿಯೂ ಸಾಕಷ್ಟು ಕಷ್ಟಕರ ಜೀವನವನ್ನೇ ಸಿಂಹ ದಂಪತಿಗಳು ಸವೆಸಿದ್ದಾರೆ. ಈ ಮಧ್ಯೆಯೂ ಹಲವಾರು ಪುಸ್ತಕಗಳಿಗೆ ರಕ್ಷಾಪುಟ, ಕ್ಯಾಲೆಂಡರ್‌ಗಳಿಗೆ ಬೇಕಾಗುವ ಚಿತ್ರಗಳನ್ನು ರಚಿಸಿದ್ದಾರೆ. ಆದರೆ ಅವರ ಮನದಲ್ಲಿನ ಕಲಾವಿದನ ತುಡಿತವೇ ಬೇರೆಯಾಗಿತ್ತು. ಮನಸ್ಸಿನ ಆಳದಲ್ಲಿ ಹುದುಗಿದ್ದ ಪಾರಂಪರಿಕ ವೈದಿಕ ಸೂಕ್ತಗಳಿಗೆ ದೃಶ್ಯರೂಪನೀಡುವ ಅವರ ಆಸೆ ಹಾಗೇ ಮುಂದುವರೆದಿತ್ತು. ಶ್ರೀ ಸೂಕ್ತದ ಶ್ಲೋಕದ ಸಾಲುಗಳಿಗೆ ಸೂಕ್ತವಾದ ದೃಶ್ಯಪರಿಕಲ್ಪನೆಯಾಗಿತ್ತು. ಆದರೆ ಅವುಗಳಿಗೆ ವರ್ಣದ ಜೀವ ತುಂಬುವ ಪ್ರಯತ್ನ ಮಾಡಿರಲಿಲ್ಲ. ಈ ಮಧ್ಯೆ ತಮ್ಮ ಕಲಾಧ್ಯಾನವನ್ನು ಪಕ್ವಗೊಳಿಸುವ ನಿಟ್ಟಿನಲ್ಲಿ ನಿರಂತರ ಕಲಾಕೃಷಿ ಮಾಡುತ್ತಲಿದ್ದರು.

ಶ್ರೀ ಸಿಂಹರವರು ಸುಮಾರು 1991 ರಿಂದ 1999 ರ ಮಧ್ಯೆದಲ್ಲಿ ರಚಿಸಿದ ಚಿತ್ರಗಳು, ಮೈಸೂರು ದಸರಾ ವಸ್ತುಪ್ರದರ್ಶನದ ಚಿತ್ರಕಲಾ ಪ್ರದರ್ಶನದಲ್ಲಿ ಪ್ರದರ್ಶನ ಕಂಡಿವೆ. ಅಲ್ಲದೇ ಐದು ಬಾರಿ ಸತತವಾಗಿ ಮೈಸೂರು ದಸರಾ ಪ್ರದರ್ಶನ ಪ್ರಶಸ್ತಿಯನ್ನು ಪಡೆದಿವೆ. ಅವರ ಬಾಲಗಣಪತಿ ಚಿತ್ರ (1999) ಬಹು ಮನೋಜ್ಞವಾದ ಚಿತ್ರವಾಗಿ ಅದರ ರಚನೆಯಿಂದ ಅವರಿಗೆ ಹೆಚ್ಚಿನ ಖ್ಯಾತಿಯನ್ನು ತಂದುಕೊಟ್ಟಿದೆ.




*ಪುಸ್ತಕವೊಂದರ ಮುಖಪುಟ*










ವಾರ/ಮಾಸಪತ್ರಿಕೆಗಳ ಮೇಲುಹೊದಿಕೆಯ ಚಿತ್ರಗಳು. ಎಡಗಡೆಯ ಮೇಲುಚಿತ್ರದಿಂದ ಪ್ರದಕ್ಷಿಣಾದಿಶೆಯಲ್ಲಿ: ಸುಧಾ ೨೫-೦೨-೧೯೭೯. ಮಯೂರ ಫೆಬ್ರವರಿ ೧೯೭೯, ಮಯೂರ ಆಗಸ್ಟ್ ೧೯೭೭
ನಾಲ್ಕು ಬಣ್ಣಗಳ ಮುದ್ರಿತ ಕಾಗದ. ವಿವಿಧ ಅಳತೆಗಳು.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

Cover illustrations of magazines
clockwise from top left: SUDHA 25-02-1979,
MAYURA Feb. 1979 & MAYURA Aug 1977
Four colour printing on paper. Various sizes.
Collection: Ramsons Kala Pratishtana, Mysuru

ಕನ್ನಡೇತರ ಪತ್ರಿಕೆಗಳ ಮೇಲುಹೊದಿಕೆಯ ಚಿತ್ರಗಳು.
ಮೇಲೆ: ಆಂಧ್ರಪ್ರಭ. ೦೧-೦೧-೧೯೬೯
ಕೆಳಗೆ: ಕಣ್ಣನ್ ದೀಪಾವಳಿ ಸಂಚಿಕೆ. ೧೯೬೬
ಮುದ್ರಿತ ಕಾಗದ. ವಿವಿಧ ಅಳತೆಗಳು.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು






Cover illustrations of non-Kannada magazines
Top: ANDHRAPRABHA 01-01-1969
Bottom: Deepavali Issue of KANNAN 1966.
Printed paper. Various sizes.
Collection: Ramsons Kala Pratishtana, Mysuru

ಮುದ್ರಿತ ಚಿತ್ರಪಟ. ಮೇಲೆ: ಶ್ರೀ ತಲಕಾವೇರಿ, ಕೆಳಗೆ: ಶ್ರೀ ಮಂಟೇಸ್ವಾಮಿ
ಮುದ್ರಿತ ಕಾಗದ. ೨೨-೧೭ ಸೆ.ಮೀ. ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು



Popular Prints
Top: SRI TALAKAVERI
Bottom: SRI MANTESWAMY
Printed paper. 22x17 cms
Collection: Ramsons Kala Pratishtana, Mysuru





ಮುದ್ರಿತ ಚಿತ್ರಪಟಗಳು.
ಮೇಲೆ: ಬಳೆಗಾರ ಚನ್ನಯ್ಯ
ಕೆಳಗೆ: ಮೀನುಗಾರ ಮಹಿಳೆ
ಮುದ್ರಿತ ಕಾಗದ. ೧೭-೨೨ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

Popular Prints.
Top: CHANNAYYA - THE BANGLE SELLER
Bottom: FISHERWOMAN
Printed paper. 17x22 cms
Collection: Ramsons Kala Pratishtana, Mysuru

# 6

# ಶ್ರೀ ಜಿ.ಎಲ್.ಎನ್.ಸಿಂಹರ ಕಲಾಕೃತಿಗಳು ಮತ್ತು ರಾಮ್‌ಸನ್ಸ್ ಕಲಾ ಪ್ರತಿಷ್ಠಾನದ ಕಲಾಪೋಷಣೆ

ಕಲಾವಿದ ಶ್ರೀ ಸಿಂಹರು ದಸರಾ ಪ್ರದರ್ಶನಗಳಲ್ಲಿ ತಮ್ಮ ಕೆಲವು ಚಿತ್ರಗಳನ್ನು ಪ್ರದರ್ಶಿಸುತ್ತಿದ್ದ ಕಾಲ ಮತ್ತು ಆ ಕಾಲದಲ್ಲಿ ಅವರ ಕೆಲವು ಚಿತ್ರಗಳು ಪ್ರಶಸ್ತಿಯನ್ನು ಪಡೆದ ವಿಷಯವನ್ನು ಮೇಲೆ ಹೇಳಲಾಗಿದೆ. ಪ್ರಶಸ್ತಿಗಳೇನೋ ಬಂದವು, ಆದರೆ ಅವುಗಳಿಂದ ಶ್ರೀ ಸಿಂಹ ಕುಟುಂಬದ ಆರ್ಥಿಕ ಸ್ಥಿತಿ ಬದಲಾಗಲಿಲ್ಲ. ಈ ಸಂದರ್ಭದಲ್ಲಿಯೇ ಬಾಲಗಣಪತಿ ಚಿತ್ರ ಒಂದು ರೀತಿಯಲ್ಲಿ ಸಿಂಹ ಮತ್ತು ರಾಮ್‌ಸನ್ಸ್ ಕಲಾ ಪ್ರತಿಷ್ಠಾನದ ಕಾರ್ಯದರ್ಶಿ ಶ್ರೀ ಆರ್.ಜಿ. ಸಿಂಗ್ ಅವರ ಅನೂಚಾನ ಬಾಂಧವ್ಯಕ್ಕೆ ನಾಂದಿಹಾಡಿತೆಂದು ಹೇಳಬಹುದು. ದಸರೆಯ ಚಿತ್ರ ಪ್ರದರ್ಶನದಲ್ಲಿ ಪ್ರದರ್ಶಿತ ಶ್ರೀ ಸಿಂಹರ ಬಾಲಗಣಪತಿ ಚಿತ್ರದ ಸಂಯೋಜನೆ ಮತ್ತು ಅದರ ಸೌಂದರ್ಯಕ್ಕೆ ಮಾರುಹೋದ ಶ್ರೀ ಆರ್.ಜಿ.ಸಿಂಗ್, ಶ್ರೀ ಸಿಂಹರವನ್ನು 2001ರಲ್ಲಿ ಕಳಲೆಯ ಅವರ ಮನೆಯಲ್ಲಿ ಭೇಟಿಮಾಡಿದರು. ಈ ಭೇಟಿ ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಮುಂದುವರೆದುಕೊಂಡುಬಂದಿದೆ. ಪ್ರಾಯಶಃ ಈ ಸಂದರ್ಭ ಬರದೇ ಹೋಗಿದ್ದರೆ ಶ್ರೀ ಸಿಂಹ ಕಲಾವಿದರಾಗಿ ಕಳೆದುಹೋಗಿಬಿಡುತ್ತಿದ್ದರು. ಅವರ ಜೀವನಕ್ಕೆ ಒಂದು ಆರ್ಥಿಕ ಸಬಲತೆ– ಅವರ ಕಲಾಕೃತಿಗಳಿಗೆ ರಾಷ್ಟ್ರವ್ಯಾಪಿ ಪ್ರಚಾರ ಹಾಗೂ ಅವರ ಆಸಕ್ತಿಯ ಕಲಾಕೃತಿಗಳ ರಚನೆಗೆ ಸಂಪೂರ್ಣ ಸಹಕಾರ ದೊರೆತಿದ್ದೇ ಈ ಭೇಟಿಯಿಂದ. ಅವರ ಜೀವನದಲ್ಲಿ ಬಹುತೇಕ ಕಲಾಕೃತಿಗಳನ್ನು ರಚನೆ ಮಾಡಿ ನೀಡಿರುವುದು ಮೈಸೂರಿನ ಕಲಾ ಸಹೃದಯಿ ಶ್ರೀ ಆರ್.ಜಿ.ಸಿಂಗ್ ರವರಿಗೆ. ಪ್ರಾಯಶಃ ಇಂದಿಗೂ ಶ್ರೀ ಸಿಂಗ್ ರವರೇ

ಅವರ ಎಲ್ಲ ಕಲಾಕೃತಿಗಳನ್ನು ಸಂಗ್ರಹಿಸಿರುವುದು ಮತ್ತು ಸಂಗ್ರಹಿಸುತ್ತಿರುವುದು. ಶ್ರೀ ಸಿಂಗ್ ಮತ್ತು ಶ್ರೀ. ಜಿ.ಎಲ್. ಎನ್ ಸಿಂಹರವರ ಸಂಬಂಧವು ಇಂದು ಕಲಾಸಹೃದಯತ್ವವನ್ನು ಮೀರಿದೆ. ಶ್ರೀ.ಆರ್.ಜಿ.ಸಿಂಗ್ ಅವರು ಶ್ರೀ ಸಿಂಹರ ಕುಟುಂಬದ ಸದಸ್ಯರಾಗಿಬಿಟ್ಟಿದ್ದಾರೆ. ಶ್ರೀ.ಸಿಂಹರವರ ಧರ್ಮಪತ್ನಿ ಶ್ರೀಮತಿ ಪ್ರೇಮಾ ಹೇಳುವಂತೆ 'ಆರ್.ಜಿ.ಸಿಂಗ್ ನಮ್ಮ ಮನೆಯ ಹಿರಿಯ ಮಗನಂತೆ ಇದ್ದಾರೆ. ನಮ್ಮ ಜವಾಬ್ದಾರಿ ಅವರದ್ದೇಆಗಿದೆ' ಎಂದು ಹೇಳುವಾಗ ಅವರ ಕಣ್ಣಲ್ಲಿ ಮಾತೃವಾತ್ಸಲ್ಯದ ಛಾಯೆ ಎದ್ದು ಕಾಣುತ್ತದೆ.

ಶ್ರೀ ಜಿ.ಎಲ್.ಎನ್.ಸಿಂಹರವರ ಕಲಾಕೃತಿಗಳು ವಿಸ್ತೃತವಾದ ಕಲಾವ್ಯಾಪ್ತಿಯನ್ನು ಹೊಂದಿವೆ. ಅವರ ಒಟ್ಟಾರೆ ಕಲಾಕೃತಿಗಳ ಅವಲೋಕನವು ಬಹು ಪ್ರೌಢವಾದ ಕಲಾ ಸಂಪ್ರದಾಯದ ಪರಿಚಯವನ್ನು ಮಾಡಿಕೊಡುತ್ತದೆ. ಕಲಾವಿದರಾಗಿ ಶ್ರೀ ಸಿಂಹರವರು ಒಬ್ಬ ಋಷಿಯಂತೆ ತಪಸ್ಸನ್ನು ಮಾಡಿದ್ದಾರೆ. ಪ್ರಾಯಶಃ ಕಳಲೆಯ ಮತ್ತು ಮೈಸೂರು ರಾಜಮನೆತನದ ಆರಾಧ್ಯ ದೈವ ಶ್ರೀ ಲಕ್ಷ್ಮೀಕಾಂತ ಸ್ವಾಮಿಯ ಪ್ರೇರಣೆಯಿಂದ ದೈವೀಕತ್ವವನ್ನು ತಮ್ಮ ಕಲಾಕೃತಿಗಳಲ್ಲಿ ತುಂಬಿದರು.

ಶ್ರೀ.ಸಿಂಹರವರು ರಚಿಸಿದ ಚಿತ್ರಗಳನ್ನು ಎರಡು ಭಾಗಗಳಾಗಿ ವಿಂಗಡಿಸಬಹುದು. ಮೊದಲಭಾಗವು ಅವರು ಕಳಲೆಗೆ ಬಂದು ನೆಲೆನಿಲ್ಲುವ ಮೊದಲಿನವು. ಅಂದರೆ 1991 ಕ್ಕಿಂತ ಮೊದಲಿನವು. 1991 ರ ನಂತರದಲ್ಲಿ ರಚಿಸಿದವು ಬಹುತೇಕವಾಗಿ ವೈದೀಕ ನೆಲೆ-ಹಿನ್ನೆಲೆಯಲ್ಲಿನ ಚಿತ್ರಗಳು. ಶ್ರೀ ಸಿಂಹರವರ ಆಳವಾದ ವೈದೀಕ ಸಾಹಿತ್ಯದ ಅಧ್ಯಯನ- ಹಲವಾರು 'ಸೂಕ್ತಗಳ' ಸ್ಪಷ್ಟವಾದ ವಿವೇಚನೆಗಳು ಅವರ ಚಿತ್ರಗಳ ಮೂಲಕವಾಗಿ ರೂಪಗೊಂಡಿವೆ.

ಶ್ರೀ ಸಿಂಹರವರು ರಚಿಸಿದ ಚಿತ್ರಗಳು- ಸಾಮಾಜಿಕ ಕಾಳಜಿಯಜೊತೆಗೆ- ಮೇಲೆ ಹೇಳಿದಂತೆ ಮಠಮಾನ್ಯಗಳವರು ಹೇಳಿ ರಚಿಸಿಕೊಂಡಂತಹವುಗಳಾಗಿವೆ. ಬಹುತೇಕ ಚಿತ್ರಗಳು ಪಟಚಿತ್ರಗಳಾಗಿ (ಕ್ಯಾಲೆಂಡರ್) ಮುದ್ರಣವಾಗಿವೆ. ಆದರೂ ಕಲಾವಿದನ ಮನದಾಳದ ಚಿತ್ರರಚನಾ ಇಚ್ಛೆಯೇ ಬೇರೆಯಾಗಿತ್ತು. ಅವರಿಗೆ ಮನದಾಳದಲ್ಲಿ ಹುದುಗಿದ್ದ ಕಲಾಭಿರುಚಿಯ ಅಭಿವ್ಯಕ್ತಿಗಳಾಗಿ ಪುರಾಣ-ವೇದ-ಉಪನಿಷತ್‌ಗಳಲ್ಲಿನ ಆಯ್ದ ಪಾತ್ರಗಳ ಮತ್ತು ವೇದ ಸೂಕ್ತಗಳ ಚಿತ್ರಗಳ ರಚನೆಯು ಅರಳಬೇಕಾಗಿದ್ದವು. ಈ ಚಿತ್ರಗಳ ರಚನೆಗೆ ಸಹಕಾರಿಯಾದವರು ಶ್ರೀ ಆರ್.ಜಿ.ಸಿಂಗ್ ರವರು. ಚಿತ್ರ ರಚನೆಯೇನೋ ನಡೆದಿತ್ತು, ಆದರೆ ಕಲಾವಿದನ ಕುಟುಂಬದ ಆರ್ಥಿಕ ಸ್ಥಿತಿ ತುಂಬ ಕಷ್ಟದಲ್ಲಿತ್ತು. ಪತಿ-ಪತ್ನಿ ಮತ್ತು ಇಬ್ಬರು ಮಕ್ಕಳು- ಅವರ ವಿದ್ಯಾಭ್ಯಾಸ-ಸಂಸಾರ ನಡೆಸುವ ಜವಾಬ್ದಾರಿ ಕಲಾವಿದ ಶ್ರೀ ಸಿಂಹರದಾಗಿತ್ತು. ಪ್ರಾಯಶಃ ಆ ಸಂದರ್ಭದಲ್ಲಿಯೇ ಅವರಿಗೆ ಹಲವಾರು ವೈದಿಕ ಸೂಕ್ತಗಳ ಸಾಲುಗಳು ದೃಶ್ಯರೂಪವಾಗುವ, ಅವುಗಳಲ್ಲಿನ ಪಾರಮಾರ್ಥತೆಯ ಬೆಳಕು ಪ್ರಜ್ವಲಿಸಲು ಪ್ರಾರಂಭವಾದದ್ದು. ಎಂತಹ ಕಷ್ಟಕರ ಜೀವನದಲ್ಲೂ ಅವರು ಚಿತ್ರ ರಚನೆ ನಿಲ್ಲಿಸದೇ ಅವುಗಳ ರಚನೆಗೆ ಸೂಕ್ತವಾದ ಸಂದರ್ಭಕ್ಕಾಗಿ ಕಾಯುತ್ತಿರುವಾಗಲೇ, ಆರ್.ಜಿ.ಸಿಂಗ್‌ರು ಶ್ರೀ ಸಿಂಹರವರ ಪರಿಕಲ್ಪನೆಗಳಿಗೆ ದೃಶ್ಯರೂಪ ನೀಡಲು ಸಹಾಯ ಹಸ್ತ ನೀಡಿದರು. ಇದರ ಫಲವಾಗಿ ಸೂಕ್ತಗಳ ದೃಶ್ಯ ರೂಪಗಳ ಅನಾವರಣ ಪ್ರಾರಂಭವಾಯಿತು. 2001 ರ ಕಾಲದಲ್ಲಿ ಶ್ರೀ ಸಿಂಹರವರು ಋಗ್ವೇದದ ಶ್ರೀ ಸೂಕ್ತದ ಸಾಲುಗಳಿಗೆ ದೃಶ್ಯರೂಪ ತುಂಬುವ ಮನೋಜ್ಞವಾದ ರೇಖಾ ಚಿತ್ರಗಳನ್ನು ಸಿದ್ಧ ಪಡಿಸಿಕೊಂಡಿದ್ದರು. ಶ್ರೀ ಸೂಕ್ತದ ರೇಖೆಗಳು ವರ್ಣಮಯವಾದ ಅತ್ಯಂತ ಸುಂದರವಾದ 15 ಚಿತ್ರಗಳಾಗಿ ಹೊರಹೊಮ್ಮಿದವು. ಆನಂತರದ್ದು ಸಿಂಹ-ಸಿಂಗರ ಜುಗಲಬಂದಿ. ನಂತರದ ರಚನೆಗಳು ಸಂವೇದನಾಶೀಲವಾದ ಮತ್ತು ಅತ್ಯದ್ಭುತವಾದ ದೃಶ್ಯಲೋಕವನ್ನು ಅನಾವರಣ ಮಾಡುತ್ತವೆ.

# 7

# ಭಾರತೀಯ ತತ್ವ ದರ್ಶನದ ದೃಶ್ಯಲೋಕ

ಶ್ರೀ ಜಿ.ಎಲ್.ಎನ್. ಸಿಂಹ ರಚಿಸಿರುವ ವೇದ ಸೂಕ್ತಗಳ, ಪೌರಾಣಿಕ ಕಥನಗಳ ಹಾಗೂ ತತ್ವಶಾಸ್ತ್ರಗಳ ಕೃತಿಗಳ ಆಯ್ದ ಕೆಲವು ಭಾಗಗಳಿಗೆ ಚಿತ್ರ ಪರಿಕಲ್ಪನೆ ಮಾಡಿ ರಚಿಸಿರುವ ಚಿತ್ರಗಳು- ಪ್ರಾಯಶಃ ಶ್ರೀ ಸಿಂಹರ ಜೀವನದ ಅತ್ಯುತ್ತಮ ಚಿತ್ರಗಳೆಂದು ಹೇಳಬಹುದು. ಭಾರತೀಯ ಪರಂಪರೆಯ ಆಧ್ಯಾತ್ಮಕ್ಕೆ ಆಧಾರವಾಗಿರುವ ವೇದಗಳ ಸೂಕ್ತಗಳು, ಪುರಾಣಗಳು ಹಾಗೂ ಚಿತ್ರ ರಚನೆಗೆ ಪೂರಕವಾದ ವಿಷ್ಣುಧರ್ಮೋತ್ತರ, ಮಾನಸೋಲ್ಲಾಸ, ಶ್ರೀ ತತ್ವ ನಿಧಿ, ಶಿವತತ್ವರತ್ನಾಕರ ಮೊದಲಾದ ಕೃತಿಗಳು ಚಿತ್ರ ರಚನೆಗೆ ಕೈಗನ್ನಡಿಯಾಗಿದ್ದು, ಚಿತ್ರಗಳ ಮೂಲ ಆಕರಗಳಾಗಿವೆ[5]. ಪ್ರಾಯಶಃ ಅವುಗಳಲ್ಲಿ ಉಲ್ಲೇಖಿತ ರೀತಿ-ರೀವಾಜು- ತಾಂತ್ರಿಕತೆ-ವರ್ಣಸಂಯೋಜನೆ- ರಚನೆ ಮೊದಲಾದ ಅಂಶಗಳು ಶ್ರೀ ಸಿಂಹರ ಮನದಾಳದಲ್ಲಿದ್ದವು. ಮೊದಲೇ ಹೇಳಿದಂತೆ ಬಾಲ್ಯದ ಸಂಸ್ಕೃತ-ಸಂಸ್ಕಾರಮಂತ್ರಗಳ ಪಠಣ-ಆಚರಣೆಗಳು ಸಹಜವಾಗಿ ಅವರನ್ನು ವೇದ ಸೂಕ್ತಗಳ ಕುರಿತಾದ ಚಿತ್ರಗಳ ರಚನೆಗೆ ಆಕರ್ಷಿಸಿದವು. ಶ್ರೀ ಸಿಂಹರು ವೇದ ಸೂಕ್ತಗಳ ರಚನೆಯಲ್ಲಿ ಪಾರಮಾರ್ಥಿಕ ಜಗತ್ತನ್ನು ಕಟ್ಟಿದ್ದಾರೆ. ಅವರೇ ಹೇಳುವಂತೆ- ನನಗೆ ಅರ್ಥವಾದಂತೆ- ವೇದ-ಸೂಕ್ತಗಳ ಸಾಲುಗಳಲ್ಲಿನ ಸಾಂಕೇತಿಕ ಅರ್ಥಗಳಿಗೆ ನನ್ನದೇ ರೀತಿಯಲ್ಲಿ ದೃಶ್ಯರೂಪನೀಡಲು ಪ್ರಯತ್ನಿಸಿದ್ದೇನೆ ಎನ್ನುತ್ತಾರೆ ಶ್ರೀ ಸಿಂಹ.

ಶ್ರೀ ಸಿಂಹರವರು 1999 ರ ಹೊತ್ತಿಗೆ ಕಲಾವಿದನಾಗಿ ಮಾಗಿ ಋಷಿತ್ವವನ್ನು ಪಡೆದುಕೊಂಡಿದ್ದರು ಎಂದರೆ ತಪ್ಪಾಗಲಾರದು. ಅವರದೇ ಶೈಲಿಯ ಚಿತ್ರಗಳು ಸುಂದರ ಪುಷ್ಪಗಳಾಗಿ ಅರಳತೊಡಗಿದ್ದವು. ಶ್ರೀ ಸಿಂಹರವರು ತಮ್ಮ ಚಿತ್ರ

ಶೈಲಿಯ ಕುರಿತು ಹೇಳುವಂತೆ-ರಾಜಾರವಿವರ್ಮ ಭಾರತೀಯನಾಗಿದ್ದು, ಐರೋಪ್ಯ ಶೈಲಿಯಲ್ಲಿ ಚಿತ್ರಗಳನ್ನು ರಚಿಸುವಲ್ಲಿ ಮತ್ತು ತೈಲವರ್ಣವನ್ನು ಉಪಯೋಗಿಸುವಲ್ಲಿ ಹಾಗೂ ಅದರಲ್ಲಿ ಭಾರತೀಯ ಪೌರಾಣಿಕ ಕಥನಗಳಿಗೆ ಜೀವಸೆಡಿ ಅತ್ಯಂತ ಸುಂದರವಾದ ತನ್ನದೇ ಆದಂತಹ ಶೈಲಿಯನ್ನು ಬೆಳೆಸಿ ಪ್ರಸಿದ್ಧನಾದ. ಹಾಗೆ ಶ್ರೀ ಸಿಂಹರವರು ಕೂಡಾ ತಮ್ಮ ಚಿತ್ರ ಶೈಲಿಯನ್ನು ಅಪ್ಪಟ ಭಾರತೀಯ ಸಂಪ್ರದಾಯಿಕ ಚಿತ್ರ ಶೈಲಿಯಾಗಿದ್ದು, ಸಾಂಕೇತಿಕತೆಗೆ ಹೆಚ್ಚು ಒತ್ತು ನೀಡುವುದಾಗಿ ಹೇಳುತ್ತಾರೆ. ಶ್ರೀ ಸಿಂಹರ ಚಿತ್ರಗಳು ಅವುಗಳ ದೃಶ್ಯದ ಅಳತೆಗೆ ತಕ್ಕಂತೆ ರಚನೆಯ ಅಳತೆಯನ್ನು ನಿರ್ಧರಿಸುತ್ತಾರೆ. ಒಂದು ಚಿತ್ರ ಪ್ರಾರಂಭಿಸಲು ಅದರದ್ದೇ ಆದಂತಹ ಕಾಲವನ್ನು ಅವರು ನಿರ್ಧರಿಸುತ್ತಾರೆ. ಅಂದರೆ ಪ್ರಾಚೀನ ವೈದಿಕ ಪರಂಪರಾಗತವಾದ ಮುಹೂರ್ತವನ್ನು ನಿರ್ಧರಿಸಿ ಬ್ರಾಹ್ಮೀ ಸಮಯದಲ್ಲಿ ಅಂದರೆ ಬೆಳಗಿನ ಜಾವದಲ್ಲಿಚಿತ್ರ ರಚನೆಯ ಸಂಕಲ್ಪವನ್ನು ಮಾಡುತ್ತಾರೆ. ಆ ದಿವಸ ಮನೆಯಲ್ಲಿ ಏನಾದರು ಸಿಹಿ ಅಡುಗೆ ಆಗಲೇ ಬೇಕು. ಅದನ್ನು ಚಿತ್ರರಚನೆಯ ಪೂರ್ವಭಾವಿ ತಯಾರಿಯಜೊತೆಗೆ ನಿವೇದನೆ ಮಾಡಿ ಪ್ರಸಾದವಾಗಿ ಸ್ವೀಕರಿಸಿ ಚಿತ್ರ ರಚನೆ ಪ್ರಾರಂಭಿಸುತ್ತಾರೆ. ಅವರ ಸಂಸ್ಕೃತ ಜ್ಞಾನದ ಜೊತೆಯಲ್ಲಿ ಪ್ರಾಚೀನ ಗ್ರಂಥಗಳಾದ ವಿಷ್ಣುಧರ್ಮೋತ್ತರದ ಚಿತ್ರಸೂತ್ರ, ಶ್ರೀತತ್ವನಿಧಿಯ ತತ್ವಗಳು ಅವರಿಗೆ ಗಾಢವಾಗಿ ತಿಳಿದಿವೆ. ಪರಂಪರಾಗತವಾದ ಈ ಕೃತಿಗಳಿಂದ ಪ್ರಭಾವಿತರಾಗಿ– ಅವುಗಳ ಮೂಲ ತತ್ವಗಳನ್ನು ಅಳವಡಿಸಿಕೊಂಡು– ಮತ್ತು ತಮ್ಮದೇ ಆದಂತಹ ವಿನ್ಯಾಸಗಳ ಅಭಿವ್ಯಕ್ತರೂಪವನ್ನು ಆಕೃತಿಗಳ ಸಂಯೋಜನೆಯಲ್ಲಿ ಶ್ರೀ ಸಿಂಹ ಬಿಂಬಿಸುತ್ತಾರೆ. ಚಿತ್ರಗಳ ಸಂಯೋಜನೆಯಲ್ಲಿ ಅವರು ದುಡಿಸಿಕೊಂಡ ಆಕೃತಿಗಳು ಸಹಜವಾಗಿ ನೀಳವಾಗಿವೆ. ಪ್ರಾಯಶಃ ಈ ಆಕೃತಿಗಳ(ಇಲಾಂಗೇಷನ್) ಲಂಬವಾದ ಹಿಗ್ಗುವಿಕೆ ಆಕೃತಿಗಳಲ್ಲಿನ ವೈಶಿಷ್ಟ್ಯತೆಯನ್ನು ಬಿಂಬಿಸುತ್ತವೆ. ಅವರ ವರ್ಣ ವಿನ್ಯಾಸದಲ್ಲಿನ ವಿಶೇಷ ಅಂಶಗಳಲ್ಲಿ– ಪಾರದರ್ಶಕತೆ, ಗಟ್ಟಿಯಾದ ವರ್ಣಗಳ ಹಾಕುವಿಕೆ– ಅತ್ಯಂತ ಸೂಕ್ಷ್ಮವಾದ ರಚನಾ ತಂತ್ರಗಾರಿಕೆಗಳು ಅವರಲ್ಲಿ ಹಾಸುಹೊಕ್ಕಾಗಿವೆ. ವರ್ಣವಿನ್ಯಾಸ ಹಾಗೂ ರಚನೆಗಳು ಅತ್ಯಂತ ಸುಂದರವೂ ಹಾಗೂ ಅರ್ಥಪೂರ್ಣವಾಗಿವೆ.

ಶ್ರೀ ಸಿಂಹರವರ ಕಲಾತ್ಮಕ ಕ್ರಿಯಾತ್ಮಕತೆಯಿಂದ ಮೂಡಿಬಂದ ಕಲಾಕೃತಿಗಳಲ್ಲಿ ಸೂಕ್ತಗಳು ಪ್ರಮುಖವಾದವುಗಳು; ಪುರುಷಸೂಕ್ತ, ಶ್ರೀ ಸೂಕ್ತ, ಅಂಭೃಣೀಸೂಕ್ತ, ರುದ್ರಸೂಕ್ತ, ಕಾಳಿಕಾಪುರಾಣ, ದಶಮಹಾವಿದ್ಯಾ, ಗಣೇಶಪುರಾಣ, ಹಾಗೂ ಗೀತಗೋವಿಂದದ ದಶಾವತಾರ ಶ್ಲೋಕಗಳಿಗೆ ದೃಶ್ಯ ರೂಪಗಳನ್ನು ನೀಡಿದ್ದಾರೆ. ಶ್ರೀ ಸಿಂಹರ ಮತ್ತೊಂದು ವಿಶೇಷವೆಂದರೆ, ಈ ಎಲ್ಲ ಸೂಕ್ತಗಳನ್ನು ಚಿತ್ರಿಸುವಾಗ ಕೇವಲ ಸಾಮಾನ್ಯವಾದ ಆಕೃತಿಗಳಿಂದ ಸಂಯೋಜನೆ ಮಾಡಲಿಲ್ಲ. ಪ್ರತಿಯೊಂದು ಸೂಕ್ತದ ಶ್ಲೋಕಗಳನ್ನು ಸಂಪೂರ್ಣವಾಗಿ ಅರ್ಥೈಸಿಕೊಂಡು–ಅವುಗಳ ಮೂಲ ಆಶಯವನ್ನು ತಿಳಿದುಕೊಂಡು ಕಲಾವಿದನಾಗಿ ಅವುಗಳ ಶ್ರವ್ಯರೂಪಗಳನ್ನು ದೃಶ್ಯರೂಪವಾಗಿ ಪರಿವರ್ತಿಸುವಲ್ಲಿ ಶ್ರೀ ಸಿಂಹ ತಮ್ಮ ಅಭಿಜಾತ ಜ್ಞಾನವನ್ನು ಧಾರೆ ಎರೆದಿದ್ದಾರೆ.

## ಅಂಭೃಣೀ ಸೂಕ್ತಗಳ ದೃಶ್ಯಾವತರಣಿಕೆ:

ಅಂಭೃಣೀ ಸೂಕ್ತ ಋಗ್ವೇದದ 10 ನೆಯ ಮಂಡಲದ 125 ನೆಯ ಸೂಕ್ತವಾಗಿದೆ. ಸಾಮಾನ್ಯವಾಗಿ ಋಗ್ವೇದ ಸೂಕ್ತಗಳ ಪಠಣದಲ್ಲಿ ದೇವಿಯ ಆರಾಧನೆಯಲ್ಲಿ ಅಂಭೃಣೀ ಸೂಕ್ತವನ್ನು ಪಠಿಸಲಾಗುತ್ತದೆ. ವಾಗ್ದೇವಿಯ ಆವಾಹನೆ, ಸಾಕ್ಷಾತ್ಕಾರಕ್ಕಾಗಿ ಈ ಸೂಕ್ತದ ಮಂತ್ರಗಳು ಬಹು ಮುಖ್ಯವಾಗಿವೆ. ಹೀಗಾಗಿ ಶ್ರೀ ಸಿಂಹ ಪ್ರಸ್ತುತ ಸೂಕ್ತದ ಮಂತ್ರಗಳನ್ನು ದೃಶ್ಯಭಾಷೆಗೆ ತರ್ಜುಮೆ ಮಾಡಿದ್ದಾರೆ. ಮಂತ್ರಗಳ ಸಾರವನ್ನು ದೃಶ್ಯಗಳನ್ನಾಗಿ ಪರಿವರ್ತಿಸುವ ಪ್ರಯತ್ನ ಬಹು ಹಿಂದಿನಿಂದಲೇ ಅನೇಕ ಕಲಾವಿದರು ಮಾಡಿದ್ದಾರೆ. ಆದರೆ ಪ್ರಸ್ತುತ ಶ್ರೀ ಸಿಂಹ ಅವರ ಸಂಯೋಜನೆ ಹಾಗೂ ವರ್ಣ ಸಂಯೋಜನೆಯಲ್ಲಿ ಮಂತ್ರಗಳು ಚಿತ್ರಗಳಾಗಿ ಪರಿವರ್ತನೆಯಾಗಿವೆ. ಸಾಮಾನ್ಯ ಚಿತ್ರವೊಂದರ ಸಂಯೋಜನೆಯನ್ನು ಹೀಗೇ ಇರಬೇಕೆಂದು ನಿರ್ಧರಿಸಿ ಚಿತ್ರಿಸಿಬಿಡುವುದು ಸುಲಭ–ಆದರೆ, ದಾರ್ಶನಿಕ ತತ್ವಗಳ ಒಳ ಮರ್ಮಗಳನ್ನು ಹಾಗೂ ಆಂತರ್ಯಗಳನ್ನು ಅರ್ಥೈಸಿಕೊಂಡು ಚಿತ್ರಿಸಿರುವ ರೀತಿ ದಾಖಲಾರ್ಹ.

ಅಂಭೃಣೀ ಸೂಕ್ತದಲ್ಲಿ ದೇವಿಯು, ಸೋಮಯಜ್ಞದ ಕುರಿತು ಸೋಮಯಾಜಿಗಳಿಗೆ ವಿವರಿಸುವ ಸನ್ನಿವೇಶವನ್ನು ಸೂಕ್ತದ ಮಂತ್ರಗಳ ರೂಪದಲ್ಲಿ ರಚಿಸಲಾಗಿದೆ. ಚಿತ್ರ ಸಂಯೋಜನೆಯಲ್ಲಿ ದೈವತ್ವದ ಮತ್ತು ವಿರಾಟರೂಪದ

ಪರಿಕಲ್ಪನೆಯನ್ನು ದೇವಿಯು ನೀಡುತ್ತಾಳೆ. ಅಂಭೃಣೀ ಸೂತ್ರದ ಒಟ್ಟು ಎಂಟು ಮಂತ್ರಗಳಲ್ಲಿ ವಿವಿಧರೀತಿಯಾಗಿ ದೇವಿಯು ತನ್ನ ಮಹಿಮೆಯನ್ನು ವಿವರಿಸಿದ್ದಾಳೆ. ಈ ವಿಚಾರಗಳನ್ನು ಪರಿಕಲ್ಪಿಸಿ- ದೃಶ್ಯ ಭಾಷೆಗೆ ಭಾಷಾಂತರಿಸಿ-ಕಲಾವಿದನ ಕ್ರಿಯಾತ್ಮಕ ಭಾಷೆಯಲ್ಲಿ ಶ್ರೀ ಸಿಂಹ ಚಿತ್ರಗಳನ್ನು ರಚಿಸಿದ್ದಾರೆ. ಅಂಭೃಣೀ ಸೂಕ್ತದ ಚಿತ್ರಗಳೆಲ್ಲವು ದೇವಿಯ ವಿವಿಧ ರೂಪಗಳನ್ನು ಮತ್ತು ಆಯಾಮಗಳನ್ನು ಬಿಂಬಿಸುತ್ತವೆ. ಪ್ರತಿಯೊಂದು ಮಂತ್ರಗಳಿಗೂ ಒಂದೊಂದು ಚಿತ್ರಗಳನ್ನು ಶ್ರೀ ಸಿಂಹ ಚಿತ್ರಿಸಿದ್ದಾರೆ. ದೇವಿಯ ಆಕೃತಿಯ ಹಿನ್ನೆಲೆಯಲ್ಲಿಉದ್ಭವಿಸಿದ ವಿವಿಧ ದೇವತಾ ಚಿತ್ರಗಳು- ಇಂದ್ರ, ರುದ್ರ, ಅಗ್ನಿ, ವಾಯು, ಅಶ್ವಿನಿದೇವತೆಗಳು, ಭೂಮಿಯಲ್ಲಿ ಯಜ್ಞದಲ್ಲಿ ನಿರತನಾದ ಋಷಿಯ ಆಕೃತಿ, ವಸು- ವಿಶ್ವ ದೇವತಾ, ಇವರೆಲ್ಲರೂ ದೇವಿಯ ದೇಹದಲ್ಲಿ ಅಡಕವಾದಂತೆ ಅಥವಾ ಅವಳಿಂದ ಉದ್ಭವವಾದಂತೆ ಬಿಂಬಿತರಾಗಿದ್ದಾರೆ. ವರ್ಣವಿನ್ಯಾಸದಲ್ಲಿಯೂ ಶ್ರೀ ಸಿಂಹ ದೇವಿಯದೇ ಆದಂತಹ ಒಂದು ಲೋಕವನ್ನು ಭಾವನಾಪೂರ್ಣವಾಗಿ ಕಾಣುವಂತೆ ಚಿತ್ರಿಸಿದ್ದಾರೆ. ಆಕೃತಿಗಳನ್ನು ದೇವಿಯ ಒಂದೊಂದು ಭಾಗಕ್ಕೆ ಪೂರಕವಾಗಿ ರಚಿಸಿರುವುದು ಅರ್ಥಗರ್ಭಿತವಾಗಿದೆ. ಇಲ್ಲಿನ ಆಕೃತಿಗಳೆಲ್ಲವೂ ಬಹುತೇಕವಾಗಿ ಮುಮ್ಮುಖವಾಗಿರುವುದು ವಿಶೇಷ.(ಪ್ರೊಫೈಲ್ ಪೋಜ್) ಭಾರತೀಯ ಚಿಕಣಿಚಿತ್ರಗಳಲ್ಲಿನ ಆಕೃತಿಗಳಲ್ಲಿ ಇಂತಹದೇ ರೀತಿಯಾದ ರಚನೆಗಳಿರುವುದನ್ನು ಸ್ಮರಿಸಬಹುದು. ಇಲ್ಲಿ ಕಲಾವಿದನ ಸೃಜನತ್ಮಕವಾದ ನಿರೂಪಣೆಯಿಂದ ಆಕೃತಿಗಳಲ್ಲಿ ವಿನ್ಯಾಸ-ವೈಶಿಷ್ಟ್ಯ (ಸ್ಟೈಲೈಜೇಷನ್) ಗಮನ ಸೆಳೆಯುತ್ತವೆ. ವರ್ಣ ವಿನ್ಯಾಸದಲ್ಲಿಯೂ ಸಂದರ್ಭಕ್ಕೆ ಸೂಕ್ತವಾದ ವರ್ಣದ ಹಿನ್ನೆಲೆಯ ಕಲ್ಪನೆ ಬಹು ಸೊಗಸಾಗಿದೆ.

ಇದೇ ಸೂಕ್ತದ ಮತ್ತೊಂದು ಚಿತ್ರದಲ್ಲಿ ದೇವಿಯ ಆರಾಧನೆ ಮತ್ತು ಅದರಿಂದ ಹೊರಹೊಮ್ಮುವ ಅಂಶಗಳನ್ನು ಬಿಂಬಿಸಿದ್ದಾರೆ. ದೇವತಾ ಆಕೃತಿಗಳು, ರುದ್ರಾದಿಗಳ ಸಹಿತವಾಗಿ ದಿಕ್ಪಾಲಕರು, ಗೋವುಗಳು ದೇವಿಯಿಂದ ಪ್ರಾದುರ್ಭವಿಸಿವೆ. ಈ ಆಕೃತಿಗಳಿಗೆ ಪೂರಕವಾಗಿ ಚಿತ್ರದ ಕೆಳಭಾಗದಲ್ಲಿ ಯಜ್ಞದಲ್ಲಿ ನಿರತನಾದ ಆಕೃತಿ ಯಜ್ಞದ ಹವಿಸ್ಸಿನಿಂದ ಉತ್ಪನ್ನವಾಗುವ ಧೂಮ್ರದ ಛಾಯೆ-ಅದರಿಂದ ಪ್ರಕಟವಾದ ದೇವಿಯ ಆಕೃತಿಗಳು ಬಹು ಸೊಗಸಾಗಿ ಮೂಡಿಬಂದಿವೆ.

ಅಂಭೃಣೀ ಸೂಕ್ತದ 5 ನೆಯ ಮಂತ್ರದ ಚಿತ್ರ ವಿನ್ಯಾಸವು ಕಲಾವಿದನ ಕಲ್ಪನಾಲೋಕದ ದಾಖಲೆಯಾಗಿದೆ. ಇಲ್ಲಿ ದೇವಿಯಿಂದ ಉದ್ಭವಿಸಿದ ನಭೋಲೋಕಗಳು: ಆದಿತ್ಯ ಲೋಕ, ವಸುಲೋಕ, ರುದ್ರಲೋಕ, ಭೂಲೋಕ, ಮಹರ್ಷಿ, ಪಂಡಿತ, ತತ್ವಜ್ಞಾನಿ ಹಾಗೂ ಚಿತ್ರದ ಕೆಳಸ್ತರದಲ್ಲಿ ಯಾಜ್ಞಿಕರ ಆಕೃತಿಗಳು ವಿನ್ಯಾಸಗೊಂಡಿವೆ. ಕಲಾವಿದ ಶ್ರೀ ಸಿಂಹರ ಯೋಚನಾಲಹರಿಯಲ್ಲಿ ಶ್ರೀರಾಮಕೃಷ್ಣ ಪರಮಹಂಸರನ್ನು ತತ್ವಜ್ಞಾನಿಯಾಗಿ ಚಿತ್ರಿಸಿದ್ದಾರೆ. ನಿಕಟಪೂರ್ವ ಸಮಕಾಲೀನ ವ್ಯಕ್ತಿಯಾದ ಶ್ರೀ ರಾಮಕೃಷ್ಣರನ್ನು ಚಿತ್ರದ ಭಾಗವಾಗಿ ರಚಿಸಿರುವುದು ಶ್ರೀ ಸಿಂಹರ ಐತಿಹಾಸಿಕ ಪ್ರಜ್ಞೆಯನ್ನು ಸೂಚಿಸುತ್ತದೆ'. ಅದೇ ರೀತಿಯಾಗಿ ದೇವಿಯೇ ಪ್ರಮುಖ ಪಾತ್ರವಾಗಿರುವ ದೃಶ್ಯ ಸಂಯೋಜನೆಗಳು ಶ್ರಿ ಅಂಭೃಣಿಸೂಕ್ತದ ಮಂತ್ರಗಳ ದೃಶ್ಯಾವತರಣಿಕೆಗಳಾಗಿ ರಚನೆಯಾಗಿವೆ.

ಅಂಭೃಣೀ ಸೂಕ್ತದಂತೆಯೇ ಶ್ರೀ ಸಿಂಹ ಋಗ್ವೇದದ ಪುರುಷ ಸೂಕ್ತ, ಶ್ರೀಸೂಕ್ತ ಮತ್ತು ರುದ್ರ ಸೂಕ್ತಗಳಿಗೆ ದೃಶ್ಯ ಅಭಿಷೇಕಮಾಡಿದ್ದಾರೆ. ಇವುಗಳಲ್ಲದೆ ದಶಮಹವಿದ್ಯಾ ಮೊದಲಾದ ಮಂತ್ರಗಳನ್ನು ದೃಶ್ಯ ಭಾಷೆಯಲ್ಲಿ ಬಿಂಬಿಸಿದ್ದಾರೆ.

### ಪುರುಷ ಸೂಕ್ತದ ಚಿತ್ರಗಳು:

ಪುರುಷ ಸೂಕ್ತ, ಋಗ್ವೇದದ ಮುಖ್ಯ ಮಂತ್ರಗಳಲ್ಲಿ ಒಂದು. ಈ ಸೂಕ್ತವು ಮಹಾಪುರುಷನ ಪರಿಕಲ್ಪನೆಯನ್ನು ನೀಡುವುದಲ್ಲದೇ ವಿರಾಟ ರೂಪದ ಕಲ್ಪನೆಯನ್ನು ನೀಡುತ್ತದೆ. ಒಂದರ್ಥದಲ್ಲಿ ಮಹಾಪುರುಷನ ಪರಿಕಲ್ಪನೆಯು ಜೀವ ರಾಶಿಗಳ- ಸೃಷ್ಟಿಯ ಉಗಮ ವಿಕಾಸವನ್ನು ಸೂಚಿಸುತ್ತದೆ. "ಸಹಸ್ರ ಶೀರ್ಷಾ ಪುರುಷ- ಸಹಸ್ರಾಕ್ಷಃ ಸಹಸ್ರ ಪಾತ್- ಸಭೂಮಿಮ್ ವಿಶ್ವತೋ ವೃತ್ವಾ-----", ಎಂಬ ಮಂತ್ರದ ಸಾಲುಗಳು ಮಹಾಪುರುಷನ ಪ್ರಖರವಾದ ರೂಪವನ್ನು ಬಿಂಬಿಸುತ್ತದೆ. ಇಲ್ಲಿ ಮಹಾಪುರುಷನಿಗೆ ಸಹಸ್ರ ತಲೆಗಳು- ಸಹಸ್ರ ಕಣ್ಣು-ಕಾಲುಗಳು-ಬಾಹುಗಳು. ಅವನಿಂದಲೆ ಸೃಷ್ಟಿಯ ಕ್ರಿಯೆ- ಹುಟ್ಟು- ಅವನೇ ನಿಯಾಮಕನೂ ಹೌದು. ಋಗ್ವೇದದ ಹತ್ತನೆಯ ಮಂಡಲದ ಈ ಸೂಕ್ತವನ್ನು ಭಾರತೀಯ ಪಾರಂಪರಿಕ ಸನಾತನ ದೃಷ್ಟಿಕೋನದಲ್ಲಿ ಆಚಾರ್ಯ ತ್ರಯರು ವಿಶ್ಲೇಷಿಸಿದ್ದಾರೆ. ಋಷಿಗಳು ಈ ಮಂತ್ರವನ್ನು ಪಠಿಸಿ-ಪ್ರಚುರಗೊಳಿಸಿದ್ದಾರೆ. ಕಲಾವಿದ ಶ್ರೀ ಸಿಂಹರ ಕುಂಚದ ಮೋಡಿಯಲ್ಲಿ ಸುಂದರವಾದ ಆಕೃತಿಗಳಾಗಿ ಹಾಗೂ

ಸಂಯೋಜನೆಗಳಾಗಿ ಪುರುಷ ಸೂಕ್ತದ ಮಂತ್ರಗಳು ರಚನೆಗೊಂಡಿವೆ. ಪುರುಷಸೂಕ್ತದ ಆರಂಭದ ಚಿತ್ರದಲ್ಲಿ, ಶ್ರೀ ಸಿಂಹ ಅವರು ಮಹಾಪುರುಷನ ಆಕೃತಿಯನ್ನು ಆದಿಶೇಷನಹಾಗೆ(ಸರ್ಪ) ಇರುವ ಹಿನ್ನೆಲೆಯ ಮೇಲೆ ಹೊರಹೊಮ್ಮುವ ಮಹಾಪುರುಷನಂತೆ ಪರಿಕಲ್ಪಿಸಿದ್ದಾರೆ. ಮಹಾಪುರುಷನಿಗೆ ಸೂಕ್ತದ ಮಂತ್ರದಲ್ಲಿ ಹೇಳಿದಂತೆ ಬಹುಸಂಖ್ಯೆಯ ತಲೆಗಳು– ಕೈಗಳು– ದೇಹದ ಅಮೂರ್ತದ ರೂಪವು ವಿಶ್ವವ್ಯಾಪಿಯಾದಂತೆ ಭಾಸವಾಗುತ್ತದೆ. ಆದಿಶೇಷನಂತಿರುವ ಆಕೃತಿಯ ಇಕ್ಕೆಲಗಳಲ್ಲಿ ವಿಸ್ಮಯಾತೀತವಾದ ನಭೋಮಂಡಲದ ಮಜಲುಗಳನ್ನು ಬಿಂಬಿಸಿದ್ದಾರೆ. ಅಲೆ–ಅಲೆಯಾಗಿ ಹರಡಿರುವ ನಭೋಮಂಡಲದ ಚಿತ್ರಣ ಸಹಜವಾಗಿ ಮಹಾಪುರುಷನ ವಿರಾಟಸ್ವರೂಪಕ್ಕೆ ಅಡಿಪಾಯವಾಗಿದೆ. ಮತ್ತೊಂದು ಚಿತ್ರದಲ್ಲಿ ಮಹಾಪುರುಷ ಯೋಗಪಟ್ಟದಲ್ಲಿ ಧ್ಯಾನಾವಸ್ಥೆಯಲ್ಲಿ ಕುಳಿತಂತೆ ಚಿತ್ರಿಸಿದ್ದಾರೆ. ಅವನ ಎದೆಯಿಂದ ಹೊರಸೂಸಿದ ತೇಜಸ್ಸು, ಹೊಸದೊಂದನ್ನು ಸೃಷ್ಟಿಸುವ ತರದಲ್ಲಿ ಅಂಡಾಕಾರದ ಆಕೃತಿಯನ್ನು ಶ್ರೀ ಸಿಂಹ ಪರಿಕಲ್ಪಿಸಿದ್ದಾರೆ. ಪ್ರಾಯಶಃ ಕಲಾವಿದನ ಕಲ್ಪನೆಯಲ್ಲಿ ಅಂಡವೆನ್ನುವುದು ಜೀವ ಧಾತುವಿನ ಮೂಲವಾಗಿದೆ. ಹೀಗಾಗಿ ಸೃಷ್ಟಿ ಪ್ರಕ್ರಿಯೆಗೆ ಅಂಡದ ಆಕೃತಿಯ ಕಲ್ಪನೆ ಕಲಾವಿದನದು. ವರ್ಣ ಸಂಯೋಜನೆಯಲ್ಲಿಯೂ ಈ ಚಿತ್ರವು ನಭೆಯ– ಸಾಕ್ಷಾತ್ಕಾರದ ಅಂಶವನ್ನೇ ಬಿತ್ತುತ್ತದೆ. ಕಲಾವಿದನಿಗೆ ಸೂಕ್ತದ ಮಂತ್ರಗಳ ಆಂತರ್ಯ ತಿಳಿದಿರುವುದರಿಂದಲೇ ಹೊಸದೊಂದು ಕಲಾತ್ಮಕ ದೃಶ್ಯಲೋಕ ಸೃಷ್ಟಿಯಾಗಿದೆ. ಪುರುಷಸೂಕ್ತದ ಮಂತ್ರಗಳಿಗೆ ಕೆಲವೆಡೆ ಒಂದೊಂದು ಮಂತ್ರಕ್ಕೆ ಒಂದೊಂದು ಚಿತ್ರ ರಚಿಸಿದ್ದರೆ ಕೆಲವೆಡೆ ಎರಡು–ಮೂರು ಮಂತ್ರಗಳನ್ನು ಕ್ರೋಢೀಕರಿಸಿ ಚಿತ್ರ ಸಂಯೋಜಿಸಿ ಒಟ್ಟು 11 ಚಿತ್ರಗಳನ್ನು ಮಾಡಿದ್ದಾರೆ. ವಿಶ್ವದ ಸೃಷ್ಟಿಗೂ, ಭೂಮಿಯ ಉಗಮಕ್ಕೂ ಮಹಾಪುರುಷನೇ ಕಾರಣವೆನ್ನುವ ಮಂತ್ರದಲ್ಲಿ (..ತಸ್ಮಾದ್ ವಿರಾಡಾಜಾಯತ, ವಿರಾಜೋ ಅಧಿ ಪೂರುಷಃ, ಸ ಜಾತೋ ಅತ್ಯರಿಚ್ಯತಃ, ಪಶ್ಚಾದ್ ಭೂಮಿ ಮಥೋ ಪುರಃ॥) ಮಹಾಪುರಷನಿಂದಲೇ ಗೋಳಾಕಾರದಲ್ಲಿ ಪರಿಕಲ್ಪಿತವಾದ ನಭೋಮಂಡಲ– ವಿಶ್ವ ಮತ್ತು ಅದರಿಂದ ಹೊರಹೊಮ್ಮಿದ ಭೂಮಿಗಳ ದೃಶ್ಯಾವಲೋಕನವಿದೆ. ಸಾಂಕೇತಿಕವಾಗಿ ಮಹಾಪುರುಷನಿಂದ ಉದ್ಭವಿಸಿದಂತೆ ಕಾಣುವ ಋಷಿಗಳು– ಅವನ ಕೈಗಳಂತೆ ಬಿಂಬಿತ ಮಾನುಷರೂಪದ ವೇದಗಳು– ಪ್ರಾದುರ್ಭವಿಸಿವೆ. ಶ್ರೀ ಸಿಂಹರ ಕಲ್ಪನೆಯ ವಿಶ್ವ, ಪ್ರಾಯಶಃ ಸಾಮಾನ್ಯನ ಕಲ್ಪನೆಗೂ ಮೀರಿದ್ದು. ಇಲ್ಲಿ ಸೂಕ್ತದ ಮಂತ್ರಗಳ ಪ್ರತಿಯೊಂದು ಸಾಲಿನ ಸಮರಸವನ್ನು ದೃಶ್ಯೀಕರಿಸುವ ಚಾಣಾಕ್ಷತೆ ಶ್ರೀ ಸಿಂಹರದು.

ಪುರುಷಸೂಕ್ತದ ಮಂತ್ರ–ವಿರಾಜ–ಯಜ್ಞದ ಕುರಿತು ಮತ್ತು ಋತು, ಮಾಸಗಳ ಹಾಗೂ ಪ್ರಕೃತಿಯ ನಿಯಾಮಕನಿಂದ ಉದ್ಭವಿಸಿದ ಜೀವರಾಶಿಯನ್ನು ಉಲ್ಲೇಖಿಸುತ್ತದೆ.(ಯತ್ಪುರುಷೇಣ ಹವಿಷಾ ದೇವಾ ಯಜ್ಞಮತನ್ವತಃ. ವಸಂತೋ ಅಸ್ಯಾಸೀದಾಜ್ಯಮ್,ಗ್ರೀಷ್ಮ ಇಧ್ಮಃ–ಶರದ್ಧವಿಃ॥) ಚಿತ್ರದಲ್ಲಿ ಋಷಿಯಿಂದ ಉದ್ಭವಿಸಿದ ಯಜ್ಞದ ಅಗ್ನಿಯ ಜ್ವಾಲೆಗೆ ಸಮಿತ್ತಿನಂತೆ ವಿರಾಜನೆ ಹವಿಸ್ಸಾದ. ವಸಂತಾದಿ ಋತುಗಳ ಉಗಮವೂ ಪುರುಷನಿಂದಲೇ ಆಯಿತು. ಚಿತ್ರದಲ್ಲಿ ಋಷಿಯ ಶಿರಭಾಗದಿಂದ ಪ್ರಾದುರ್ಭವಿಸಿದ ಅಗ್ನಿಯಜ್ವಾಲೆಯೇ ಯಜ್ಞಕುಂಡವಾಗಿದೆ. ಅದೇ ರೀತಿಯಾಗಿ ಮತ್ತೊಂದು ಮಂತ್ರದಲ್ಲಿ ಮಹಾಪುರುಷನ ಮನಸ್ಸಿನಿಂದ ಚಂದ್ರನು, ಕಣ್ಣುಗಳಿಂದ ಸೂರ್ಯ, ಮುಖದಿಂದ ಅಗ್ನಿಯು, ಪ್ರಾಣದಂತಿರುವ ವಾಯು ಅವತರಿಸುತ್ತಾರೆ ಎಂಬ ವಿವರಣೆಇದೆ. ಈ ಅಂಶಗಳನ್ನು ದೃಶ್ಯೀಕರಿಸಿರುವ ಶ್ರೀ ಸಿಂಹ ಸೊಗಸಾದ ಚಿತ್ರವನ್ನು ಪರಿಕಲ್ಪಿಸಿ ಬಿಂಬಿಸಿದ್ದಾರೆ.

ಶ್ರೀ ಸಿಂಹರವರ ಸಮಕಾಲೀನ ಕಲಾವಿದರನ್ನು ನೋಡಿದಾಗ– ಬಹುತೇಕವಾಗಿ ಸಮಕಾಲೀನ ಬಗೆಯ ವಿನ್ಯಾಸ ಹಾಗೂ ಸಂಯೋಜನೆಗಳುಳ್ಳ ಚಿತ್ರಗಳನ್ನೇ ರಚಿಸಿರುವುದು ಕಂಡುಬರುತ್ತದೆ. ಬಹುಶಃ ಶ್ರೀ ಸಿಂಹರು ಸ್ವತಂತ್ರ ಕಲಾಕೃತಿಯನ್ನು ಬಿಂಬಿಸುವಲ್ಲಿ ಇದ್ದಿರಬಹುದಾದ ಸ್ವತಂತ್ರವನ್ನು ವೈದಿಕ ಚಿತ್ರಗಳ ರಚನೆಯಲ್ಲಿ ತುಂಬಿದ್ದಾರೆ. ಆ ಕಾಲದಲ್ಲಿ ಅಂದರೆ ಸುಮಾರು 1980–90 ರ ದಶಕದಲ್ಲಿ ಹೆಚ್ಚು ಪ್ರಸಿದ್ಧಿಗೆ ಬಂದಿದ್ದ ದಿ.ಕಮಲೇಶ, ಶ್ರೀ ಬಿ.ಕೆ.ಎಸ್.ವರ್ಮ, ಶ್ರೀ ಚಂದ್ರನಾಥ ಆಚಾರ್ಯ ಮೊದಲಾದವರು ತಮ್ಮ ಚಿತ್ರಗಳಲ್ಲಿ ಕಥಾನಿರೂಪಣಾ ತತ್ವವನ್ನು ಮೈಗೂಡಿಸಿಕೊಂಡು ಹಾಗೂ ಸಾಂಕೇತಿಕತೆಯನ್ನು ಸಾರ್ಥಕವಾಗಿ ಬಿಂಬಿಸಿದ್ದಾರೆ. ಇವರುಗಳ ಜೊತೆಯಲ್ಲಿಯೇ ಸೂಕ್ತ–ಉಪನಿಷತ್ತುಗಳನ್ನು ಮುಖ್ಯವಾಗಿಟ್ಟುಕೊಂಡು ಚಿತ್ರ ರಚಿಸುತ್ತಿತ್ತುವ ಮೈಸೂರಿನವರೇ ಆದ ಶ್ರೀ ಜಯದೇವ ಹೆಚ್. ಅವರ ಕಲಾಕೃತಿಗಳನ್ನು ಇಲ್ಲಿ ಗಮನಿಸಬಹುದು[7]. ಅಂತೆಯೇ ಶ್ರೀ ಸಿಂಹ ಈ ಎಲ್ಲ ಕಲಾವಿದರಿಗಿಂತ ವಿಭಿನ್ನವಾಗಿ ತಮ್ಮದೇ ಲೋಕವನ್ನು ಕಲಾಕೃತಿಗಳ ಮೂಲಕವಾಗಿ ಕಟ್ಟಿಕೊಟ್ಟಿದ್ದಾರೆ. ಶ್ರೀ ಸಿಂಹರು ಕೂಡಾ ಕಥಾನಿರೂಪಣೆಯಲ್ಲಿಯೇ ಸಾಂಕೇತಿಕತೆಯನ್ನು





ಶ್ರೀಸೂಕ್ತ ೧, ೩. ೨೦೦೧
ಕಾಗದದ ಮೇಲೆ ಪೋಸ್ಟರ್ ಬಣ್ಣ. ೪೮-೫೮ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

SRISUKTA 1, 3. 2001
Poster colours on paper. 48x58 cms
Collection: Ramsons Kala Pratishtana, Mysuru





ಪುರುಷ ಸೂಕ್ತ ೧, ೧೦. ೨೦೦೨
ಕಾಗದದ ಮೇಲೆ ಪೋಸ್ಟರ್ ಬಣ್ಣ. ೪೮–೫೮ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

PURUSHA SUKTA 1, 10. 2002
Poster colours on paper. 48x58 cms
Collection: Ramsons Kala Pratishtana, Mysuru







ಅಂಭೃಣೀದೇವಿ ಸೂಕ್ತ ೧. ೫. ೨೦೦೪
ಕಾಗದದ ಮೇಲೆ ಪೋಸ್ಟರ್ ಬಣ್ಣ. ೫೧-೬೧ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

AMBHRINI DEVI SUKTA 1, 5. 2004
Poster colours on paper. 51x61 cms
Collection: Ramsons Kala Pratishtana, Mysuru





ರುದ್ರಧ್ಯಾನ, ರುದ್ರ ೯. ೨೦೦೫
ಕಾಗದದ ಮೇಲೆ ಪೋಸ್ಟರ್ ಬಣ್ಣ. ೫೧–೬೧ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

RUDRA DHYANA & RUDRA 9. 2005
Poster colours on paper. 51x61 cms
Collection: Ramsons Kala Pratishtana, Mysuru

ತುಂಬುತ್ತ ಅರ್ಥವಂತಿಕೆಯನ್ನು ಮೆರೆಯುತ್ತಾರೆ. ಪುರುಷ ಸೂಕ್ತದ ಹನ್ನೊಂದು ಚಿತ್ರಗಳು ಋಗ್ವೇದದ ಆಂತರ್ಯವನ್ನು ದೃಶ್ಯ ಭಾಷೆಗೆ ಪೂರಕವಾಗಿ ತೆರೆದಿಡುತ್ತವೆ.

## ಶ್ರೀಸೂಕ್ತದ ಚಿತ್ರಗಳು:

ಶ್ರೀಸೂಕ್ತಕ್ಕೆ ಹದಿನೈದು ಚಿತ್ರಗಳನ್ನು ಶ್ರೀ ಸಿಂಹರು ರಚಿಸಿದ್ದಾರೆ. ಶ್ರೀ ಸೂಕ್ತದಲ್ಲಿನ ಮಂತ್ರಗಳು ಕೂಡಾ ದೃಶ್ಯರೂಪಗಳಾಗಿ ರಚನೆಯಾಗಿವೆ. ಶ್ರೀ ಸೂಕ್ತವು ಎಲ್ಲ ಸಿರಿಗಳ ಅಧಿದೇವತೆಯಾದ ಲಕ್ಷ್ಮಿಯನ್ನು ಸ್ತುತಿಸುತ್ತದೆ. ಲಕ್ಷ್ಮಿಯ ಉಗಮ-ಅವಳ ವರ್ಣನೆ ಮತ್ತು ಅವಳಿಂದಾಗುವ ಸೃಷ್ಟಿ ಕಾರ್ಯವನ್ನು ಮಂತ್ರಗಳಾಗಿ ವರ್ಣಿಸಲಾಗಿದೆ. ಶ್ರೀ ಸಿಂಹರವರು ಆ ಮಂತ್ರಗಳನ್ನು ಆಳವಾಗಿ ಅಭ್ಯಸಿಸಿ ತಮ್ಮ ಚಿತ್ರಗಳನ್ನು ಶ್ರೀ ಸೂಕ್ತಕ್ಕೆ ಆಕರ್ಷಕವಾದ ಮತ್ತು ಅರ್ಥಪೂರ್ಣವಾದ ವಿನ್ಯಾಸಗಳನ್ನು ಮಾಡಿದ್ದಾರೆ. ಶ್ರೀ ಸೂಕ್ತದಲ್ಲಿ- ದೇವಿಯೇ ಆರಾಧ್ಯ ದೈವ. ದೇವಿಯ ಮಹಿಮೆಯನ್ನು ಕೊಂಡಾಡುವ ಸ್ತುತಿಗಳಿವೆ ಮತ್ತು ವರ್ಣನೆಗಳಿವೆ. ಕಲಾವಿದ ಶ್ರೀ ಸಿಂಹ, ದೇವಿಯ ಮಹಿಮೆಯನ್ನು ದೃಶ್ಯಕ್ಕೆ ಬಹು ಯೋಗ್ಯವಾಗಿ ಮತ್ತು ಸಾದ್ಯಂತವಾಗಿ ಅಳವಡಿಸಿದ್ದಾರೆ. ಅವರೇ ಹೇಳುವ ಹಾಗೆ ಚಿತ್ರರಚನೆಯಲ್ಲಿ ತಾನು ನಿಮಿತ್ತ ಮಾತ್ರ, ರಚಿಸಲು ಉತ್ತಮವಾದ ದಿನದಂದು ಸಂಕಲ್ಪಮಾಡಿ ಕೆಲಸ ಪ್ರಾರಂಭಿಸುತ್ತಾರೆ. ನಂತರದ ಕೆಲಸ ಆ ಪರಮಾತ್ಮನಿಗೆ ಬಿಟ್ಟಿದ್ದು. ಏನು ಚಿತ್ರಿಸಬೇಕೆಂಬುದನ್ನು ಆ ಸಮಯಕ್ಕೆ ಚಿತ್ರಗೊಳ್ಳುವ ದೇವಿಯೇ ಸ್ಫೂರ್ತಿ. ಕಾಗದದ ಮೇಲೆಮೇಲೆ ಯಾವ ರೀತಿಯಾಗಿ ಸಂಯೋಜನೆಯಾಗಬೇಕು-ವರ್ಣ ವಿನ್ಯಾಸವಾಗಬೇಕೆಂಬುದನ್ನು ಆ ಸಂದರ್ಭಕ್ಕೆ ನಿರ್ಧರಿಸಲಾಗುತ್ತದೆ. ಚಿತ್ರ ರಚನೆಯನ್ನು ಮಾಡುತ್ತ ಸೂಕ್ತವಾದ ಮತ್ತು ಸುಂದರವೆನಿಸುವ ಬದಲಾವಣೆಗಳನ್ನು ಮಾಡಿಕೊಳ್ಳಲಾಗುತ್ತದೆ. ದೇವಿಯ ಮಹಿಮೆಯನ್ನು ಚಿತ್ರಭಾಷೆಯಮೂಲಕವಾಗಿ ಶ್ರೀ ಸಿಂಹ ಇಲ್ಲಿ ಬಿಂಬಿಸಿದ್ದಾರೆ.

ಶ್ರೀಸೂಕ್ತದ ಚಿತ್ರಗಳಲ್ಲಿ ದೇವಿಯ ಚಿತ್ರವೈಭವವನ್ನು ನೋಡಬಹುದು. "ಹಿರಣ್ಯವರ್ಣಾಮ್ ಹರಿಣೀಮ್ ಸುವರ್ಣ ರಜತಸ್ರಜಾಮ್........" ಎಂಬ ಸಾಲುಗಳಲ್ಲಿ ದೇವಿಯನ್ನು ವರ್ಣಿಸಲಾಗಿದೆ. ಅದೇ ರೀತಿ ದೇವಿಯನ್ನು ಚಿತ್ರಿಸುವಲ್ಲಿ ಶ್ರೀ ಸಿಂಹ, ಬಹು ಮಾರ್ಮಿಕವಾಗಿ ದೇವಿಯ ಆಕೃತಿಯನ್ನು ಜಿಂಕೆಯೊಂದಿಗೆ ಪರಿಕಲ್ಪಿಸಿ ತಮ್ಮದೇ ಆದರೀತಿಯಲ್ಲಿ ಸಂಯೋಜಿಸಿದ್ದಾರೆ. ಮತ್ತೊಂದು ಚಿತ್ರಸಂಯೋಜನೆಯಲ್ಲಿ ಹಿರಣ್ಯ, ಗೋವು, ಅಶ್ವ ಹಾಗೂ ಜನರನ್ನು ಚಿತ್ರಿಸುತ್ತದೆ. "ಅಶ್ವಪೂರ್ವಾಂ ರಥಮಧ್ಯಾ ಹಸ್ತಿನಾದ ಪ್ರಬೋಧಿನೀಮ್....." ಎಂಬ ಮಂತ್ರದಲ್ಲಿ ದೇವಿಯನ್ನು ರಥದಲ್ಲಿ ಹಸ್ತಿಗಳ ಮಧ್ಯೆ-ಅಂದರೆ ಆನೆಗಳ ಮಧ್ಯದಲ್ಲಿ ಆಸೀನಳಾಗಿರುವಂತೆ ಕಲ್ಪಿಸಿ ಮಂತ್ರಕ್ಕೆ ಪೂರಕವಾಗಿ ಚಿತ್ರಿಸಿದ್ದಾರೆ. ಪ್ರಸ್ತುತ ಚಿತ್ರಸಂಯೋಜನೆಯನ್ನು ಗಮನಿಸಿದಾಗ ಬಹು ಸೊಗಸಾದ ಸನ್ನಿವೇಶವನ್ನು ಇಲ್ಲಿ ಕಾಣಬಹುದು. ನಭೋಮಂಡಲದ ಮಧ್ಯೆ ದೇವಿಯು ರಥಾರೂಢಳಾಗಿದ್ದು, ಪ್ರಾಚೀನ ಶಿಲ್ಪಗಳಲ್ಲಿ ಬಿಂಬಿಸಿರುವ ಗಜಲಕ್ಷ್ಮಿಯ ಶಿಲ್ಪದಂತೆ- ರಥದ ಇಕ್ಕೆಲಗಳಲ್ಲಿ ಶ್ವೇತ ಹಸ್ತಿಗಳನ್ನು(ಆನೆ) ಮತ್ತು ಮುಂಭಾಗದಲ್ಲಿ ಎರಡು ಅಶ್ವಗಳನ್ನು(ಕುದುರೆ) ಸಂಯೋಜಿಸಿದ್ದಾರೆ. ಇದರಿಂದಾಗಿ ಒಂದುರೀತಿಯ ಉತ್ಸಾಹದ ಆಚರಣೆಯನ್ನು ಚಿತ್ರ ಸಂಯೋಜನೆಯಲ್ಲಿ ಕಾಣಬಹುದು. ಕಲಾವಿದನ ಕಲ್ಪನೆಗೆ ಎಣೆ ಇಲ್ಲ ಎಂಬುದಕ್ಕೆ ಶ್ರೀ ಸಿಂಹರ ಈ ಕಲಾರಚನೆಗಳು ಸೂಕ್ತ ದಾಖಲೆಗಳಾಗಿವೆ. ಶ್ರೀ ಸೂಕ್ತದ ಮತ್ತೊಂದು ಚಿತ್ರದಲ್ಲಿ, ಸೃಷ್ಟಿ ಕ್ರಿಯೆಯಲ್ಲಿ ದೇವಿಯಿಂದ ಸೃಷ್ಟಿಯಾದ ವನದ ರಾಜ ಬಿಲ್ವ ವೃಕ್ಷ, ಅದರಿಂದ ಯೋಗರೂಪದಲ್ಲಿ ಉದ್ಭವಿಸಿದ ಆಕೃತಿಯನ್ನು ಬಿಂಬಿಸಿದ್ದಾರೆ. ವೃಕ್ಷ-ವನಸ್ಪತಿ- ಹಾಗೂ ಪರಿಸರ ಹೀಗೆ ಕಲಾವಿದನ ಕ್ರಿಯಾತ್ಮಕವಾದ ಕಾಳಜಿಯನ್ನು ನೋಡಬಹುದಾಗಿದೆ. ಚಿತ್ರದಲ್ಲಿ ವೃಕ್ಷದಿಂದ ಪ್ರತ್ಯಕ್ಷಳಾದಂತೆ ಕಾಣುವ ದೇವಿ- ಹೊಂಬಣ್ಣದ ಹಿನ್ನೆಲೆಯಲ್ಲಿನ ರೆಂಬೆ-ಕೊಂಬೆಗಳು- ಅವುಗಳಿಂದ ಉದ್ಭವಿಸುವ ಆಕೃತಿಗಳು ಕಲಾವಿದನ ಕ್ರಿಯಾತ್ಮಕತೆ, ಹೊಸದನ್ನು ಸೃಷ್ಟಿಸುವ ಇಚ್ಛಾಶಕ್ತಿಗಳು ಶ್ರೀ ಸೂಕ್ತದ ಚಿತ್ರಗಳ ರಚನೆಯಲ್ಲಿ ಮೇಳೈಸಿವೆ.

ಸೂಕ್ತಗಳ ಚಿತ್ರಣದಲ್ಲಿ ಮುಂದುವರೆದು ವಿಶ್ಲೇಷಣೆ ಮಾಡಿದಾಗ ಶ್ರೀ ಸಿಂಹರ ರಚನೆಯ ರುದ್ರ ಸೂಕ್ತದ ಚಿತ್ರಗಳು ಕೂಡಾ ಗಮನಸೆಳೆಯುತ್ತವೆ.

ಶ್ರೀ ಸಿಂಹ ಕಲಾವಿದನಾಗಿ ಬಹುತೇಕವಾಗಿ, ಆಧ್ಯಾತ್ಮ-ವೇದ-ಪುರಾಣ-ಉಪನಿಷತ್‌ಗಳ ಆಯ್ದ ಮಂತ್ರಗಳಿಗೆ ಕಥಾನಕಗಳೆಂಬಂತೆ ಚಿತ್ರಗಳನ್ನು ರಚಿಸಿದ್ದಾರೆ. ಅವರು ತಮ್ಮ ಮೈಸೂರು ವಾಸ್ತವ್ಯದ ಸಂದರ್ಭದಲ್ಲಿ ಕ್ಯಾಲೆಂಡರ್, ಪ್ರಕೃತಿ ಚಿತ್ರಗಳು, ಕಟ್ಟಡಗಳನ್ನು ಮುಖ್ಯವಾಗಿಟ್ಟುಕೊಂಡು ಚಿತ್ರಿಸಿದ ಚಿತ್ರಗಳು, ಅಲ್ಲದೆ ದೇಶಿ- ಜಾನಪದ ಸೊಗಡಿನ ಸಂಯೋಜನೆಗಳೂ ಕೂಡಿವೆ. ಶ್ರೀ ಸಿಂಹ ಅವರ ಕಲೆಯಲ್ಲಿನ ನೈಪುಣ್ಯತೆ-ಕೌಶಲತೆ ಹಾಗೂ ತಾಂತ್ರಿಕತೆ ಅಸಾಧಾರಣವಾದದ್ದು. ಚಿತ್ರಸಂಯೋಜನೆಗಳ, ರೇಖಾ ಚಿತ್ರಗಳನ್ನು ತಮ್ಮ ಕಲ್ಪನಾ ಲಹರಿಯಲ್ಲಿ ಸಾದ್ಯಂತವಾಗಿ ದಾಖಲಿಸುವ ಪರಿ ಯಾವ ಅಂತರರಾಷ್ಟ್ರೀಯ ಕಲಾವಿದನಿಗೂ ಕಮ್ಮಿಯಿಲ್ಲ. ಮೈಸೂರು ಚಾಮರಾಜೇಂದ್ರ ತಾಂತ್ರಿಕ ಕಲಾ ಶಾಲೆಯಲ್ಲಿ ಅಧ್ಯಯನ ಮಾಡಿದ ಬಹುತೇಕ ಕಲಾವಿದರು ಒಂದಲ್ಲ ಒಂದು ರೀತಿಯಲ್ಲಿ ದೇವತಾ ಚಿತ್ರಗಳ ರಚನೆಗಳನ್ನು ಮಾಡಿದ್ದಾರೆ. ಪ್ರಾಯಶಃ ಇದಕ್ಕೆ ಕಾಗಣವು 19 ನೆಯ ಶತಮಾನದಿಂದ ಪ್ರಖರತೆಗೆ ಬಂದಂತಹ ಮೈಸೂರು ಪಾರಂಪರಿಕ ಚಿತ್ರ ಶೈಲಿ ಮತ್ತು ರಚನೆಗಳು ಎಂದು ಹೇಳಬಹುದು. ಏಕೆಂದರೆ- ಆ ಚಿತ್ರಗಳಲ್ಲಿ ಬಹುತೇಕವಾಗಿ ಎಲ್ಲವೂ ದೇವತಾ ಅಥವಾ ದೇವತಾ ಸಂಬಂಧೀ ಚಿತ್ರಗಳೆ ಆಗಿವೆ. ಶೈಲಿಯಲ್ಲಿನ ವ್ಯತ್ಯಾಸವನ್ನು ಬಿಟ್ಟರೆ-ಬಹುತೇಕ ಎಲ್ಲವೂ ಒಂದೆ ಗುಂಪಿಗೆ ಸೇರಿದ ಚಿತ್ರಗಳು. ಮೈಸೂರಿಗೆ ಬಂದಿದ್ದ- ಕೇರಳದ ಕಲಾವಿದ ರವಿವರ್ಮನ ಕಲಾಕೃತಿಗಳಲ್ಲಿ ಬಿಂಬಿತವಾಗಿರುವ ದೇವತಾಕೃತಿಗಳು ಅವನು ತೈಲ ವರ್ಣ ಮತ್ತು ನೈಜ-ನಾಟಕೀಯ ಸಂಯೋಜನೆ ಹಾಗೂ ಭಾವಾಭಿವ್ಯಕ್ತತೆಯನ್ನು ತನ್ನ ಕಲಾಕೃತಿಗಳಲ್ಲಿ ತುಂಬಿರುವುದು ಬಹು ರಂಜಿತವಾಗಿದೆ. ನಂತರದಲ್ಲಿ ಕೆ.ವೆಂಕಟಪ್ಪನವರ ಕಲಾಕೃತಿಗಳು ಒಂದರ್ಥದಲ್ಲಿ, ಆಧುನಿಕತೆಯ ಸ್ನಾನದಲ್ಲಿ ಮಿಂದೆದ್ದ ರಾಮಾಯಣದ ಚಿತ್ರಗಳು-ಇತ್ತ ಸಂಪೂರ್ಣ ಸಾಂಪ್ರದಾಯಿಕವೂ ಅಲ್ಲದ- ಅಥವಾ ಆಧುನಿಕವೂ ಅಲ್ಲದ ಅವರದ್ದೇ ಆದಂತಹ ಶೈಲಿಯನ್ನು ವೆಂಕಟಪ್ಪ ಹುಟ್ಟುಹಾಕಿದ್ದರು. ಪ್ರಾಯಶಃ ಅವರ ಕಲಾಕೃತಿಗಳಲ್ಲಿ ಬಂಗಾಳದ ಕಲಾಗುರು ಅವನೀಂದ್ರನಾಥ ಟ್ಯಾಗೋರರ ಪ್ರಭಾವ ಮತ್ತು ಮೈಸೂರು ಸಾಂಪ್ರದಾಯಿಕ ಚಿತ್ರ ಶೈಲಿಗಳ ಸಮ್ಮಿಶ್ರಣವನ್ನು ಗುರುತಿಸಬಹುದು. ಶ್ರೀ ಸಿಂಹರಿಗೆ ಅಂತಹ ಯಾವುದೇ ಪ್ರಭಾವಕಾರಿಯಾದ ಕಲಾ ಪ್ರಭಾವ ಇರಲಿಲ್ಲ. ಮೈಸೂರಿನಲ್ಲಿಯ ಶುದ್ಧ ಐರೋಪ್ಯ ಶೈಲಿಯ ತರಗತಿಗಳ ಪ್ರಭಾವ- ಜೊತೆಯಲ್ಲಿ ಸಮಕಾಲೀನ ಸಾಂಪ್ರದಾಯಿಕ ಮೈಸೂರು ಚಿತ್ರ ಶೈಲಿಯ ಪ್ರಭಾವಗಳು ಕಲಾಕೃತಿಗಳಲ್ಲಿ-ಕಲಾವಿದರಲ್ಲಿ ಮೇಳೈಸಿದ್ದವು. ಹೀಗಾಗಿ ಬಹುತೇಕರು ಒಂದೇ ನಿರ್ಧರಿತ ಶೈಲಿಗೆ ಅಂಟಿಕೊಳ್ಳದೇ ತಮ್ಮದೇ ರೀತಿ-ರಿವಾಜನ್ನು ಅಳವಡಿಸಿಕೊಂಡು ಚಿತ್ರಶೈಲಿಯನ್ನು ಬೆಳೆಸಿಕೊಂಡರು ಮತ್ತು ಬಳಸಿಕೊಂಡರು.

ಶ್ರೀ ಜಿ.ಎಲ್.ಎನ್.ಸಿಂಹರ ಕಲಾಕೃತಿಗಳಲ್ಲಿ ದುಡಿಸಿ ಕೊಳ್ಳಲಾದ ಆಕೃತಿಗಳನ್ನು ನಾವು ಇಲ್ಲಿ ಸ್ವಲ್ಪ ಗಂಭೀರವಾಗಿ ಹಾಗೂ ಸೂಕ್ಷ್ಮವಾಗಿ ಗಮನಿಸಬೇಕು. ಅವರ ಎಲ್ಲ ಆಕೃತಿಗಳು ನಿರ್ಧರಿತ ತಾಲ-ಮಾನಗಳಿಗಿಂತ ಸ್ವಲ್ಪ ಉದ್ದವಾಗಿರುತ್ತವೆ. ಅಂದರೆ ಪಾರಂಪರಿಕ ಪ್ರತಿಮಾ ಲಕ್ಷಣಗಳ ಲಾಕ್ಷಣಿಕ ಗ್ರಂಥಗಳಲ್ಲಿನ ತಾಲ-ಮಾನವನ್ನು ತಮ್ಮದೇ ಆದರೀತಿಯಲ್ಲಿ ಅವರು ಅಳವಡಿಸಿಕೊಂಡಿದ್ದಾರೆ. ಸಾಮಾನ್ಯವಾಗಿ ಆಗಮಗಳಲ್ಲಿ ಹೇಳಿದ ಹಾಗೆ ಉತ್ತಮ ದಶತಾಲವು ದೇವತಾ(ಪುರುಷ) ಆಕೃತಿಗಳಿಗೆ ಸೂಚಿಸಲ್ಪಟ್ಟಿದೆ. ಅಲ್ಲದೇ ಸ್ತ್ರೀ ದೇವತೆಗಳಿಗೆ ಅಷ್ಟಮ ತಾಲವೂ, ಹೀಗೆ ವಿಭಿನ್ನ ದೇವತಾ ಆಕೃತಿಗಳಿಗೆ ಒಂದೊಂದು ಅಳತೆಯನ್ನು ಪ್ರಾಚೀನ ಗ್ರಂಥಗಳು ಸೂಚಿಸುತ್ತವೆ. ಕಲಾವಿದ ಸಿಂಹರವರು ಅವುಗಳನ್ನು ತಮ್ಮ ಚಿತ್ರಗಳ ಆಕೃತಿಗಳ ರಚನೆಗಳಲ್ಲಿ ಅಳವಡಿಸಿಕೊಂಡಿದ್ದಾರೆ. ಸ್ವಲ್ಪ ಉದ್ದ-ಹಾಗೂ ಲಂಬವಾಗಿ ಹಿಗ್ಗಿಸಿದಂತೆ ಕಾಣುವ ಆಕೃತಿಗಳು ವರ್ಣ ಸಂಯೋಜನೆಯಲ್ಲಿ ಬಹು ಆಕರ್ಷಕವಾಗಿ ಅತಿಮಾನುಷಾಕೃತಿಗಳಾಗಿವೆ. ಪ್ರಾಯಶಃ ನಾವು ಇಲ್ಲಿ- ಇಟಾಲಿಯನ್ ಕಲೆಯಲ್ಲಿನ ಮ್ಯಾನರಿಜಂ ಕಲಾಪಂಥದಲ್ಲಿನ- ಪರ್ಮಿಜಿಯಾನಿನೋ (1503-1540. ಪಾರ್ಮಾ-ಇಟಲಿ)ಎಂಬ ಕಲಾವಿದನ ಕಲಾಕೃತಿಗಳನ್ನು ಇಲ್ಲಿ ಸ್ಮರಿಸಬಹುದು. ಅವನ ಕಲಾಕೃತಿಗಳಲ್ಲಿನ ಆಕೃತಿಗಳು ಅತ್ಯಂತ ನಾಜೂಕಾಗಿ ಉದ್ದವಾಗಿದ್ದು ತಮ್ಮದೇ ಆದಂತಹ ಸುಂದರ ನೈಜ ಛಾಪನ್ನು ನೀಡುತ್ತವೆ. ಅದೇ ರೀತಿಯಾಗಿ ಎಲ್‌ಗ್ರೀಕೋ ಎಂಬ ಕಲಾವಿದನೂ ಕೂಡಾ ಅದೇ ತರಹದಲ್ಲಿ ಉದ್ದನೆಯ ಆಕೃತಿಗಳನ್ನು ಚಿತ್ರಗಳಲ್ಲಿ ದುಡಿಸಿಕೊಂಡಿದ್ದಾನೆ. ಅವನ ಚಿತ್ರಗಳಲ್ಲಿ ಬೈಜಂಟೈನ್(ಸುಮಾರು 5-9 ನೆಯ ಶತಮಾನ) ಚಿತ್ರಗಳ ಪ್ರತಿಮಾ ರೀತಿಯ ಅಂಶಗಳನ್ನು ನೋಡಬಹುದು. ಭಾರತೀಯ ಚಿತ್ರಕಲೆಯಲ್ಲಿಯೂ ಇಂತಹ ಹಲವಾರು ದಾಖಲೆಗಳಿವೆ. ವಿಶೇಷವಾಗಿ ಬೆಂಗಾಲ್ ಕಲಾ ಶಾಲೆಯ ಅಬನೀಂದ್ರನಾಥ ಟ್ಯಾಗೋರರ ಶಿಷ್ಯ ಮತ್ತು ಖ್ಯಾತ ಚಿತ್ರಕಲಾವಿದರಾಗಿದ್ದ ಶ್ರೀ ಬಿನೋದ್ ಬಿಹಾರಿ ಮುಖರ್ಜೀ ಅವರು ರಚಿಸಿದ ಹಿಂದಿ ಭವನದ ಭಿತ್ತಿ

ಚಿತ್ರದಲ್ಲಿನ ಆಕೃತಿಗಳು ಕೂಡಾ ಅದೇ ವರ್ಗಕ್ಕೆ ಸೇರಿವೆ. ಶ್ರೀ ಸಿಂಹ ರವರ ಚಿತ್ರಗಳಲ್ಲಿನ ಆಕೃತಿಗಳು ಕೂಡ ಉದ್ದನೆಯ ಮೈಮಾಟವನ್ನು ಹೊಂದಿವೆ. ಅವರೇ ದುಡಿಸಿಕೊಂಡಿರುವ ಈ ಆಕೃತಿಗಳ ಶೈಲಿ ಒಂದು ರೀತಿಯಲ್ಲಿ ಹೊಸ ವಿನ್ಯಾಸವನ್ನು ಪರಿಚಯಿಸುತ್ತವೆ.

ಶ್ರೀ ಸಿಂಹ ಅವರು ದೇವತಾ ಚಿತ್ರಗಳ ರಚನಾ ಅಯ್ಕೆಯು ಅವರ ಅತ್ಯಂತ ಪ್ರೀತಿಯ ಹಾಗೂ ಅಂತರಂಗದ ಆಸಕ್ತಿಯ ವಿಷಯ. ಈ ಮೊದಲು ಬೇರೆಯವರ ಕೋರಿಕೆಯ ಮೇರೆಗೆ ಅವರ ಆಸಕ್ತಿಯ ಚಿತ್ರಗಳನ್ನು ಮಾಡಿಕೊಡುತ್ತಿದ್ದರು. ಅವರೇ ಹೇಳಿದಂತೆ ಮೈಸೂರಿನ ಕಲಾಪೋಷಕ ಶ್ರೀ ಆರ್.ಜಿ.ಸಿಂಗ್ ರ ಭೇಟಿಯ ನಂತರ ಶ್ರೀ ಸಿಂಹ ರವರ ಮನದಾಳದ ಆಸೆಗಳಿಗೆ ಜೀವಂತಿಕೆ ಬಂದಿತು. ಅವುಗಳಿಗೆ ರೆಕ್ಕೆ-ಪುಕ್ಕ ಬಂದು ಬಲಿತು ಸುಂದರ ಆಕೃತಿಗಳಾಗಿ ಭಾವೋನ್ಮಾದದ ದಾಖಲೆಗಳಾಗಿ ಚಿತ್ರವಂತಿಕೆಯಲ್ಲಿ ಅರಳುವಂತಾದವು. ಇಲ್ಲಿ ದೇವತಾ ಉಪಸಾಕನಾದ ಕಲಾವಿದ, ತನ್ನ ಉಪಾಸನೆಯ ಭಾವವನ್ನು ಕಲೆಯ ಮೂಲಕವಾಗಿ ಸಾರ್ಥಕಗೊಳಿಸಿದ್ದಾನೆ. ಅವರ ಮನದಾಳದ ಭಾವನೆಯ-ಕಲ್ಪನೆಯ ಅರಳಿರುವ ದೇವತಾ ಚಿತ್ರಗಳು ಶ್ರೀ ಸಿಂಹರ ಕಲಾ ಕುಸುಮಗಳಾಗಿವೆ. ಒಂದುರೀತಿಯಲ್ಲಿ ಆತ್ಮ ಸಾಕ್ಷಾತ್ಕಾರದ ಮೂಲಕವಾಗಿ ದೇವತಾ ಸಾಕ್ಷಾತ್ಕಾರದ ದಾರಿಯೂ ಇದಾಗಿರಬಹುದೆನ್ನಬಹುದು.

## ಶ್ರೀ ರುದ್ರ ಸೂಕ್ತದ ದೃಶ್ಯಾವಳಿಗಳು:

ಕಲಾವಿದ ಶ್ರೀ ಜಿ.ಎಲ್.ಎನ್.ಸಿಂಹರ ಕಲ್ಪನೆಯ ಕೂಸಾದ ರುದ್ರ ಸೂಕ್ತ ಮಂತ್ರಗಳ ದೃಶ್ಯಾವತರಣಿಕೆಗಳ ಮಂಥನ ಕಲಾವಿದನ ಕಲಾಸ್ಮೃತಿಯ ಹೊಸ ಆಯಾಮವನ್ನು ಪರಿಚಯಿಸುತ್ತದೆ. ರುದ್ರ ಸೂಕ್ತವು ಕೃಷ್ಣಯಜುರ್ವೇದದ ಐದನೆಯ ಮಂಡಲದಲ್ಲಿದೆ. ರುದ್ರನ ಭಯಂಕರ ರೂಪ- ಅವನು ನಿರ್ವಹಿಸುತ್ತಿರುವ ಕಾರ್ಯಾದಿಗಳು- ಜಲ-ಚರ-ವನ್ಯ-ಮೃಗ-ಕೃಷಿ-ಭೂಮಿ-ಮೊದಲಾದ ವಸ್ತು ವಿಚಾರಗಳು ಈ ಸೂಕ್ತದ ಮಂತ್ರಗಳಲ್ಲಿ ಉಲ್ಲೇಖವಾಗಿವೆ. ರುದ್ರಧ್ಯಾನ ಮಂತ್ರವನ್ನು ಬಹು ಸುಂದರವಾಗಿ ಶ್ರೀ ಸಿಂಹ ಚಿತ್ರವನ್ನಾಗಿಸಿದ್ದಾರೆ. ಶ್ವೇತವರ್ಣದವನಾದ ಶಿವನು ಪದ್ಮಾಸನದಲ್ಲಿ ಸಂಯೋಜನೆಯ ಮಧ್ಯೆ ಆಸೀನನಾಗಿದ್ದು ಋಷಿ- ಮುನಿಗಳಿಂದ ಸುತ್ತುವರೆದಿದ್ದಾನೆ. ಅಭಯ ಹಸ್ತದಲ್ಲಿನ ಶಿವನ ತಲೆಯಮೇಲೆ ಋಷಿಗಳೀರ್ವರು ಅಭಿಷೇಕಮಾಡುತ್ತಿದ್ದು ನಿರೂಪಣೆ ಬಹುಸೊಗಸಾಗಿದೆ. ಇಲ್ಲಿ ಋಷಿಗಳ ಅಭಿಷೇಕದ ಚಿತ್ರಣದಲ್ಲಿ-ಅಭಿಷೇಕದ ನೀರು ನೇರವಾಗಿ ಶಿವನ ತಲೆಯ ಜಟೆಯಮೇಲೆ ಬೀಳದೆ, ಶಿವಲಿಂಗದಾಕೃತಿಯಮೇಲೆ ಬೀಳುತ್ತಿರುವುದು ಸಾಂಕೇತಿಕವಾಗಿ ರುದ್ರ-ಅಭಿಷೇಕಪ್ರಿಯ ಎಂಬ ಮಾತನ್ನು ಸೂಕ್ತವಾಗಿ ದೃಶ್ಯೀಕರಿಸಿದ್ದಾರೆ. ಶಿವನನ್ನು ಪ್ರಾಚೀನ ಕೃತಿಗಳಲ್ಲಿ ಶ್ವೇತಾಂಬರ ಎಂದೇ ವಿವರಿಸಿದೆ. ಸಾಂಕೇತಿಕವಾಗಿ ತ್ರಿಶೂಲ ಮತ್ತು ಪಿನಾಕಿ-ಬಿಲ್ಲನ್ನು ಎಡಗೈಯಲ್ಲಿ ಹಿಡಿದು ಬಲಗೈಯ್ಯನ್ನು ಅಭಯದಲ್ಲಿ ಚಿತ್ರಿಸಿದ್ದಾರೆ. ಶಿವನ ಮತ್ತೊಂದು ಹೆಸರಾದ ನೀಲಕಂಠ ಎಂಬ ಉಲ್ಲೇಖಕ್ಕೆ ಪೂರಕವಾಗಿ ಅವನ ಕಂಠವನ್ನು ನೀಲ ವರ್ಣವಾಗಿ ಚಿತ್ರಿಸಲಾಗಿದೆ. ಪಾರಂಪರಿಕ ಚಿತ್ರಲಕ್ಷಣಗಳನ್ನು ಅಳವಡಿಸಿಕೊಂಡು ತಮ್ಮದೇ ಯೋಚನಾಲಹರಿಯಲ್ಲಿ ಸಂಯೋಜನೆಯನ್ನು ಮಾಡಿದ್ದಾರೆ. ರುದ್ರ ಸೂಕ್ತದಲ್ಲಿ ರುದ್ರನು- ಕೃಷಿ-ಕುಶಲಕಲೆ-ಮೊದಲಾದವುಗಳ ಅಧಿದೇವತೆ ಎಂಬ ಸಾಲುಗಳಿಗೆ ಅತಿಸುಂದರವಾಗಿ ಜೀವತುಂಬಿದ್ದಾರೆ ಕಲಾವಿದರು. ಶಿವನ ಬೃಹದಾಕಾರದ ಆಕೃತಿಯು ಇಡೀ ಪಟವನ್ನು ಆವರಿಸಿದಂತೆ ಚಿತ್ರಿಸಲಾಗಿದ್ದು- ಶಿವನಿಂದಲೇ ಉದ್ಭವಿಸಿದಂತೆ ಕಾಣುವ- ಎತ್ತುಗಳಿಂದ ನೇಗಿಲ ಊಳುವ ಕೃಷಿಕ-ಕುಂಬಾರ, ಕಂಬಾರ ಹಾಗೂ ಬಡಿಗ-(ಪಂಚಾಳ-ಪರಿಕಲ್ಪನೆಗೆ ಇಲ್ಲಿಯೇ ಜೀವ ಸೆಲೆ ಬರುವುದು) ಈ ಎಲ್ಲ ಆಕೃತಿಗಳು ಮತ್ತು ಶಿವನೇ ಇವುಗಳ ಅಧಿದೈವ ಎಂಬಂತೆ ಬಿಂಬಿಸಲಾಗಿದೆ. ಇವೆಲ್ಲವನ್ನು ಆಹ್ವಾನಿಸುವ ಋಷಿಯೊಬ್ಬ ನೀರಿನಕೊಳದಲ್ಲಿ ಸ್ತುತಿ ಮಾಡುತ್ತಿರುವ ಚಿತ್ರವು, ಭೂಮಿ ಮತ್ತು ಸುರಲೋಕವನ್ನು ಸಮ್ಮಿಲನಗೊಳಿಸುವಂತಹ ವಿನ್ಯಾಸವನ್ನು ಶ್ರೀ ಸಿಂಹ ಮಾಡಿದ್ದಾರೆ. ಮತ್ತೊಂದು ಚಿತ್ರದಲ್ಲಿ ಶಿವನು ದಕ್ಷಿಣಾಮೂರ್ತಿಯಂತೆ ಅರ್ಧಲಲಿತಾಸನದಲ್ಲಿ ಕುಳಿತಿದ್ದಾನೆ. ತೆಳು ಹಳದಿವರ್ಣದಲ್ಲಿ ಶಿವನ ರೂಪು ಇದೆ. ಶಿವನಿಂದಲೇ ರಕ್ಷಿತವಾದ ವನಸ್ಪತಿ, ಋಷಿಗಳು, ಕ್ಷಾತ್ರರು,ಗೋವುಗಳು, ಅಶ್ವಗಳು, ಸಸ್ಯಸಂಕುಲ ಹೀಗೆ ಬಹು ಸುಂದರವಾದ ಕಲ್ಪನೆಯನ್ನು ಕಲಾವಿದರು ನೀಡಿದ್ದಾರೆ. ಶಿವನ ಜಡೆಯಿಂದ ಉದ್ಭವಿಸಿದಂತೆ ಕಾಣುವ ಕಿರಿದಾದ ಗಿಡ-ಮರಗಳು-ಹಿನ್ನೆಲೆಯಲ್ಲಿ ಸುಂದರ ಪಿರಮಿಡ್‌ನಾಕಾರದ ಬೆಟ್ಟಗಳ ಸಾಲು-ಹೀಗೆ ಸಂಪೂರ್ಣವಾಗಿ ಪ್ರಕೃತಿ ಸೌಂದರ್ಯದ ಸಾಕಾರದಂತೆ ಕಾಣುವಹಾಗೆ ಚಿತ್ರವನ್ನು ರಚಿಸಲಾಗಿದೆ. ರುದ್ರ ಸೂಕ್ತದ

ಮಂತ್ರಗಳ ಕೆಲವು ಮಾತ್ರ ಚಿತ್ರಗಳಾಗಿವೆ. ಈ ಚಿತ್ರಗಳ ರಚನೆಯಲ್ಲಿ ಶ್ರೀ ಸಿಂಹರು ಪಾರಂಪರಿಕ ಚಿತ್ರ ರಚನಾ ಸೂತ್ರಗಳನ್ನು ಗಮನದಲ್ಲಿಟ್ಟಿದ್ದಾರೆ. ಆಕೃತಿಗಳ ಸಂಯೋಜನೆಯಲ್ಲಿ ಸಮಾನತೆ, ವರ್ಣ ಸಂಯೋಜನೆಗಳು ಬಹು ಅರ್ಥಪೂರ್ಣವಾಗಿ ಮತ್ತು ಪಕ್ವವಾಗಿ ಮೂಡಿಬಂದಿವೆ.

## ಜಯದೇವ ಕವಿಯ ಗೀತಗೋವಿಂದದ ಚಿತ್ರಗಳು(ದಶಾವತಾರ ದರ್ಶನ)

ಭಾರತದ ಮಧ್ಯಕಾಲೀನ ಭಕ್ತಿ ಸಾಹಿತ್ಯದ ಕವಿ ಜಯದೇವನ ಗೀತಗೋವಿಂದ ಕೃತಿಯು ಪ್ರಾಜ್ಞರಿಗೆ ಬಹು ಪ್ರಿಯವಾದ ಸಾಹಿತ್ಯವಾಗಿದೆ. ಕಲಾವಿದರೂ ಕೂಡಾ, ಅದರಲ್ಲೂ ರಾಜಸ್ಥಾನಿ ಚಿಕಣಿ ಚಿತ್ರಕಲಾವಿದರು ಗಿತ ಗೋವಿಂದದ ಪ್ರಭಾವದಿಂದ ಸುಂದರವಾದ ಚಿತ್ರಗಳ ರಚನೆಮಾಡಿದ್ದಾರೆ. ಶ್ರೀ ಸಿಂಹ ಕೂಡ ಜಯದೇವನ ಗೀತಗೋವಿಂದದ ಸಾಲುಗಳಿಗೆ ದೃಶ್ಯ ಜೀವಂತಿಕೆಯನ್ನು ತುಂಬಿದ್ದಾರೆ. ಸಹಜವಾಗಿ ಭಗವಂತನ ಸಾಕ್ಷಾತ್ಕಾರಕ್ಕೆ ಪೂರಕವಾದ ದೇವ-ದೇಹದ ಪರಿಪೂರ್ಣ ಚಿತ್ರಣವು ಇಲ್ಲಿದೆ. ಶ್ರೀ ಸಿಂಹರು ಗೀತಗೋವಿಂದದ ಭಾಗವಾಗಿ ವಿಷ್ಣುವಿನ ದಶಾವತಾರದ ಚಿತ್ರಗಳನ್ನು ರಚಿಸಿದ್ದಾರೆ. ಕಲಾವಿದನ ಕಲ್ಪನಾ ಲೋಕದಲ್ಲಿ ಈ ಚಿತ್ರಗಳು ಬಹು ಸೊಗಸಾಗಿಯೂ, ಕಲ್ಪನಾತೀತವಾದ ಸಂಯೋಜನೆ ಹಾಗೂ ದೃಶ್ಯ ವೈಭವನ್ನು ನೋಡಬಹುದು. ಎಲ್ಲ ಚಿತ್ರಗಳಲ್ಲಿ ಶ್ರೀ ವಿಷ್ಣುವಿನ ಆಕೃತಿ ಮೂಲಭೂತವಾಗಿದ್ದು- ಅದರ ಮುನ್ನೆಲೆಯಲ್ಲಿ ಅಥವ ಅದರ ಭಾಗವಾಗಿ ಉದ್ದೇಶಿತ ಆಕೃತಿಗಳ ಚಿತ್ರಣವಾಗಿದೆ. ಮತ್ಸ್ಯಾವತಾರದ ಚಿತ್ರದಲ್ಲಿ ವಾರಿಧಿಯ ಮಧ್ಯದಲ್ಲಿ ಬೃಹತ್ ಆಕಾರದ ಮೀನು ಬಾಯಲ್ಲಿ ವೇದಗಳ ಪುಸ್ತಕದ ಕಟ್ಟನ್ನು ಹಿಡಿದಿದ್ದು, ಮತ್ಸ್ಯದ ಮುಂಭಾಗದಲ್ಲಿ- ಅದರ ಭಾಗವಾಗಿ ಶ್ರೀ ವಿಷ್ಣು ಅವತರಿಸಿದ್ದಾನೆ. ವಾರಿಧಿಯ ಅಲೆಗಳ ಮುಂಚಾಲನಾ ವೇಗಕ್ಕೆ ಪೂರಕವಾಗಿ ಶ್ರೀ ವಿಷ್ಣು ಮತ್ತು ಮತ್ಸ್ಯ ಈರ್ವರನ್ನುಬಿಂಬಿಸಿರುವ ರೀತಿ ಕಲಾವಿದನ ಕಲ್ಪನಾ ಶಕ್ತಿಯನ್ನು ಪ್ರಕಟಿಸುತ್ತದೆ. ಪ್ರಾಯಶಃ ಇದೇ ಸಂಯೋಜನಾ ತತ್ವಗಳಡಿಯಲ್ಲಿ ಗೀತಗೋವಿಂದದ ಚಿತ್ರಗಳ ಅನಾವರಣವಾಗಿವೆ. ಕೂರ್ಮಾವತಾರದ ಚಿತ್ರಣದಲ್ಲಿಯೂ ಕಲಾವಿದರು ಈ ಹಿಂದಿನ ಚಿತ್ರದ ಜಾಡನ್ನೇ ಅನುಸರಿಸಿದ್ದಾರೆ. ಮೂಲ ಅವತಾರದ ಆಶಯವನ್ನು ಅತ್ಯಂತ ನಿಷ್ಠವಾಗಿ ಬಿಂಬಿಸಿದ್ದು ಇವುಗಳ ಚಿತ್ರಣವು ವಿಸ್ಮಯಪಡುವಂತಹದು.

ವರಾಹ ಅವತಾರವೂ ಕೂಡಾ ಸಮುದ್ರಕ್ಕೆ ಸಂಬಂಧಿಸಿದ್ದು. ಈ ಅವತಾರದಲ್ಲಿ ಶ್ರೀ ವಿಷ್ಣು ಭೂದೇವಿಯನ್ನು ಅಸುರ ಹಿರಾಣ್ಯಕ್ಷನಿಂದ ರಕ್ಷಿಸುವ ಚಿತ್ರಣದಲ್ಲಿ ಸಾಂಕೇತಿಕತೆಗೆ ಹೆಚ್ಚಿನ ಒತ್ತನ್ನು ಕಲಾವಿದರು ನೀಡಿದ್ದಾರೆ. ಶ್ರೀವಿಷ್ಣು, ಸಮುದ್ರದಲ್ಲಿ ತನ್ನ ಮಹಾರೂಪನ್ನು ಬಿಂಬಿಸುತ್ತ, ಅವನಿಂದ ಸಾಕಾರಗೊಂಡ ಶ್ವೇತವರಾಹದ ಆಕೃತಿ ಪ್ರಾದುರ್ಭವಿಸಿದಂತೆ ಕಾಣುತ್ತದೆ. ವರಾಹವು ಸಹಜವೆಂಬಂತೆ ಗೋಳಾಕಾರದ ಭೂಮಿಯನ್ನು ತನ್ನ ಕೊರೆಯಲ್ಲಿ ಎತ್ತಿ ಹಿಡಿದಿದ್ದು, ಸಮುದ್ರದಿಂದ ಮೇಲೆತ್ತುತ್ತಿರುವಂತೆ ಭಾಸವಾಗುತ್ತದೆ. ಕಲಾವಿದರ ಪರಿಕಲ್ಪನೆಯು ಅಗಾಧವಾದದ್ದು. ದೃಶ್ಯ ಪರಿಕಲ್ಪನೆಗೆ ಪೂರಕವಾದ ಚಿತ್ರಣವು ಬಹು ಅರ್ಥಪೂರ್ಣವಾಗಿ ಮೂಡಿಬಂದಿದೆ. ನಾರಸಿಂಹ ಅವತಾರದಲ್ಲಿ- ಹಿರಣ್ಯಕಶಿಪುವನ್ನು ತನ್ನ ತೊಡೆಯಮೇಲೆ ಹಾಕಿಕೊಂಡು ತನ್ನ ಹರಿತವಾದ ನಖಗಳಿಂದ ಉದರಬಗೆಯುವ ರೀತಿ-ಪಾರಂಪರಿಕ ಶಿಲ್ಪಗಳ ನೆನಪು ತರುತ್ತದೆ. ವಿಶೇಷವೆಂದರೆ ಚಿತ್ರದ ಹಿನ್ನೆಲೆಯಲ್ಲಿ ಶ್ರೀ ವಿಷ್ಣುಕೂಡಾ ಕೋಪಯುಕ್ತ ಮುಖದಿಂದ ಪ್ರಕಟವಾದಂತೆ ಚಿತ್ರಿತವಾಗಿದ್ದಾನೆ. ಶ್ರೀ ಸಿಂಹ- ನರಸಿಂಹನನ್ನು ಬಿಂಬಿಸಿದ ರೀತಿ ಬಹುಶಃ ಅತ್ಯಂತ ವಿಭಿನ್ನವಾಗಿದೆ. ಸಾಮಾನ್ಯವಾಗಿ ಮೂಲ ಅವತಾರದ ಚಿತ್ರಣ ಮಾತ್ರವೇ ರಚನೆಯಾಗಿದ್ದು- ತಮ್ಮ ಎಲ್ಲ ಅವತಾರದ ಚಿತ್ರಗಳಲ್ಲಿ ಶ್ರೀ ವಿಷ್ಣು ಹಿನ್ನೆಲೆಯಲ್ಲಿ ಪ್ರಕಟವಾದಂತೆ ಬಿಂಬಿಸಿರುವುದು ಕಲಾವಿದರ ಕಲ್ಪನೆಯ ಪ್ರತೀಕವಾಗಿದೆ.

ವಾಮನ-ತ್ರಿವಿಕ್ರಮ ಅವತಾರದ ಚಿತ್ರಣವೂ ಕೂಡ ಬಹು ವಿಸ್ಮಯವೆನಿಸುವ ಸುಂದರವಾದ ಕಲ್ಪನಾತೀತವಾದ ಸೌಂದರ್ಯವನ್ನು ಮತ್ತು ಸಂಯೋಜನೆಯನ್ನು ಹೊಂದಿದೆ. ಶ್ರೀ ವಿಷ್ಣು, ಬ್ರಾಹ್ಮಣ ವಟುವಿನ ರೂಪದಲ್ಲಿ ಬಲಿಯನ್ನು ದಮನಮಾಡಲು ಬಂದು ತ್ರಿವಿಕ್ರಮನಾಗಿ ಬೆಳೆದ ರೀತಿ ಪುರಾಣಗಳಲ್ಲಿ ಬಹು ಭವ್ಯವಾಗಿ ಉಲ್ಲೇಖಗೊಂಡಿದೆ. ಕಲಾವಿದರು ಇಲ್ಲಿ ವಾಮನನ್ನೇ ತ್ರಿವಿಕ್ರಮನಾಗಿ ಬಿಂಬಿಸಿದ್ದಾರೆ. ಚಿತ್ರದಲ್ಲಿ ಕಿರಿದಾದ ವಿಷ್ಣುವಿನ ಆಕೃತಿ ರಚಿಸಿ ಅವನಿಂದ ವಾಮನ ಉದ್ಭವಿಸಿದಂತೆ ಬಿಂಬಿತವಾಗಿದ್ದಾನೆ. ವಿಷ್ಣುವಿನ ಪಾದದಿಂದ ಗಂಗೋದ್ಭವದ ಚಿತ್ರಣವು ಹೊಯ್ಸಳ ಶಿಲ್ಪಗಳ ನೆನಪನ್ನು ತರುತ್ತದೆ. ಅಲ್ಲದೇ ಇದು ಮೂಲ ಕಾವ್ಯದ ಆಶಯಕ್ಕೂ ಸರಿಯಾಗಿದೆ.





ವರದಾಯಿನಿ ಶ್ರೀಕಾಲಿಕಾ ಪರಮೇಶ್ವರಿ
ಮತ್ತು ಜಗತ್‌ಸೃಷ್ಟಿ (ಕಾಲಿಕಾ ಪುರಾಣ). ೨೦೦೨
ಕಾಗದದ ಮೇಲೆ ಪೋಸ್ಟರ್ ಬಣ್ಣ. ೪೮–೫೮ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

VARADAYINI SRI KALIKAPARAMESHWARI
& JAGAT SRUSHTI (KALIKA PURANA). 2002
Poster colours on paper. 48x58 cms
Collection: Ramsons Kala Pratishtana, Mysuru





ಗಣೇಶ ಪುರಾಣದ ಎರಡು ಚಿತ್ರಗಳ ವಿವರ. ೨೦೦೯
ಕಾಗದದ ಮೇಲೆ ಪೋಸ್ಟರ್ ಬಣ್ಣ. ೪೮-೫೮ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

Detail from two paintings of
GANESHA PURANA. 2009
Poster colours on paper. 48x58 cms
Collection: Ramsons Kala Pratishtana, Mysuru





ಗೀತಗೋವಿಂದ (ದಶಾವತಾರ) ೫, ೯. ೨೦೧೨
ಕಾಗದದ ಮೇಲೆ ಪೋಸ್ಟರ್ ಬಣ್ಣ. ೪೮–೫೮ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

GEETAGOVINDA (DASHAVATARA) 5, 9. 2012
Poster colours on paper. 48x58 cms
Collection: Ramsons Kala Pratishtana, Mysuru









ಮೇಲಿಂದ ಕೆಳಗೆ: ಮಾತಂಗಿ, ಬಗಲಾಮುಖಿ, ಕಮಲಾತ್ಮಿಕಾ ಮತ್ತು ತಾರಾ (ದಶಮಹಾವಿದ್ಯಾ) ಚಿತ್ರಗಳ ವಿವರ. ೨೦೦೩
ಕಾಗದದ ಮೇಲೆ ಪೋಸ್ಟರ್ ಬಣ್ಣ. ೪೮-೫೮ ಸೆ.ಮೀ.
ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು

From top: Detail of MATANGI, BAGALAMUKH
KAMALATMIKA & TARA (DASHAMAHAVIDYA). 200
Poster colours on paper. 48x58 cm:
Collection: Ramsons Kala Pratishtana, Mysuru

ಪರಶುರಾಮನ ಅವತಾರದ ಚಿತ್ರಣವು ಬಹುಶಃ ಶ್ರೀ ಸಿಂಹರು ರಚಿಸಿದ ದಶಾವತಾರದ ಚಿತ್ರಗಳಲ್ಲಿಯೇ ಬಹು ವಿಶಿಷ್ಟವಾದ ಸಂಯೋಜನೆಯನ್ನು ಹೊಂದಿದೆ. ತಂದೆ ಜಮದಗ್ನಿ ಋಷಿಯ ಹತ್ಯೆಯ ಪ್ರತೀಕಾರವಾಗಿ ವಿಶ್ವವನ್ನು 21ಬಾರಿ ಪ್ರದಕ್ಷಿಣೆ ಹಾಕಿ ಕ್ಷತ್ರಿಯರ ಸಂಹಾರ ಮಾಡಿ ಅವರ ರಕ್ತದಿಂದ ಭೂಮಿಗೆ ಅಭಿಷೇಕ ಮಾಡಿ ಆಕೆಯನ್ನು ಶಾಂತಗೊಳಿಸುವಂತೆ ಪರಶುರಾಮನನ್ನು ಚಿತ್ರಿಸಲಾಗಿದೆ. ಪರಶುರಾಮ ತನ್ನ ಕೊಡಲಿಯನ್ನು ಕಟೀವಸ್ತ್ರದಲ್ಲಿ ಕಟ್ಟಿಕೊಂಡಿರುವ ರೀತಿ ತುಂಬ ಸೊಗಸಾಗಿ ಚಿತ್ರಣಮಾಡಲಾಗಿದೆ. ನಂತರದ ಅವತಾರವಾದ ರಾಮಾವತಾರದ ಚಿತ್ರಣದಲ್ಲಿ ವಿಸ್ಮಯದಂತಿರುವ ಸಂಯೋಜನೆ ಗಮನ ಸೆಳೆಯುತ್ತದೆ. ಶ್ರೀರಾಮನು ಅವತರಿಸಿದ ಕಾರಣ ರಾವಣನ್ನು ವಧಿಸಲು. ರಾವಣನ ದೇಹದಿಂದ ಅವನ ತಲೆಗಳು ಛೇದನಗೊಂಡುಳ ಹತ್ತು ತಲೆಗಳನ್ನು ಹತ್ತು ದಿಕ್ಕುಗಳಿಗೆ (ಅಷ್ಟ ದಿಕ್ಕು, ಮೇಲೆ ಮತ್ತು ಕೆಳಗೆ) ಬಲಿ ನೀಡುತ್ತಿರುವಂತೆ ಕಲಾವಿದರು ರಾಮಾವತಾರದ ರಾಮನನ್ನು ಚಿತ್ರಿಸಿದ್ದಾರೆ. ಬಲರಾಮಾವತಾರದ ಚಿತ್ರಣವೂ ವಿಶೇಷ. ಬಲರಾಮನ ಕೈಯಲ್ಲಿರುವ ಹಲಾಯುಧವನ್ನು ನೋಡಿ ಹೆದರಿದ ಶ್ಯಾಮಲವರ್ಣೆಯಾದ ಯಮುನೆಯು ಶರಣಾಗತಳಾಗಿ ಬಂದು ಬಲರಾಮನ ಸೊಂಟವನ್ನು ಬಳಸಿ ತಬ್ಬಿರುವಂತೆ ಆತನುಟ್ಟಿರುವ ಶ್ಯಾಮಾಂಬರವನ್ನು ವರ್ಣಿಸಿರುವ ಕವಿಯ ಮಾತುಗಳನ್ನು ಅದ್ಭುತವಾಗಿ ಚಿತ್ರಿಸಿದ್ದಾರೆ.

ಬೌದ್ಧಾವತಾರದ ವಿಷ್ಣು–ಸಹಜವಾಗಿ ಬೌದ್ಧನಂತೆ ಕಂಗೊಳಿಸುತ್ತಿದ್ದಾನೆ. ಕಾಷಾಯ ವಸ್ತ್ರವನ್ನು ಧರಿಸಿ– ಹಸನ್ಮುಖಿಯಾಗಿ ತನ್ನ ಭಕ್ತರ ಅಭಿಲಾಷೆಗಳನ್ನು ಈಡೇರಿಸುವಂತೆ ನಿಂತಿದ್ದಾನೆ. ಸಂಯೋಜನೆಯಲ್ಲಿ ಆಡುಗಳು– ಭಕ್ತರನ್ನು ಶ್ರೀ ಸಿಂಹ ಚಿತ್ರಿಸಿದ್ದಾರೆ. ಯಜ್ಞ–ಯಾಗಾದಿಗಳನ್ನು ತಿರಸ್ಕರಿಸಿದ ಬುದ್ಧ ಅದರಿಂದ ಯಜ್ಞಪಶುಗಳಾದ ಆಡು–ಕುರಿಗಳ ಹತ್ಯೆಯನ್ನು ನಿವಾರಿಸಿ ಅಹಿಂಸೆಯನ್ನು ಬೋಧಿಸಿದ ತತ್ತ್ವವನ್ನು ಸುಲಲಿತವಾಗಿ ಚಿತ್ರಿಸಿದ್ದಾರೆ. ಬುದ್ಧನ ಚಿತ್ರ– ಗೌತಮನ ಛಾಯೆಯನ್ನು ಹೊಂದಿರುವುದು ದಿಟ. ಕಲ್ಕಿಯವತಾರದ ಚಿತ್ರವೂ ಕೂಡ ಕವಿಕಲ್ಪನೆಯಂತೆ ಸುಂದರವಾಗಿ ಅರಳಿದೆ. ದಶಾವತಾರದ ಒಟ್ಟಾರೆ ಚಿತ್ರಣಗಳು ಒಂದು ವಿಸ್ಮಯವಾದ ಕಲಾಲೋಕದ ಸಂಚಾರಕ್ಕೆ ಕೊಂಡೊಯ್ಯುತ್ತವೆ. ಪಾರಂಪರಿಕ ಕೃತಿಗಳಲ್ಲಿ ಉಲ್ಲೇಖಿತ ದಶಾವತಾರದ ವಿವರಣೆಗಳು– ಜಯದೇವನ ದಾಖಲೆ– ಹಾಗೂ ಕಲಾವಿದರ ಕ್ರಿಯಾತ್ಮಕ ಮತ್ತು ಸೃಜನಾತ್ಮಕವಾದ ಪರಿಕಲ್ಪನೆಗಳು ಒಂದಕ್ಕೊಂದು ಪೂರಕವಾಗಿ ಚಿತ್ರಕುಸುಮಗಳಾಗಿ ಮೂಡಿಬಂದಿವೆ.

ಶ್ರೀ ಸಿಂಹರ ರಚನೆಯ ದೇವತಾ ಚಿತ್ರಗಳಲ್ಲಿ ಶ್ರೀ ದಶಮಹಾವಿದ್ಯಾ ಚಿತ್ರಗಳೂ ಕೂಡಾ ಸೂಕ್ತದ ದೃಶ್ಯ ದಾಖಲೆಗಳಂತೆ ಗಮನ ಸೆಳೆಯುತ್ತವೆ. ದಶಮಹಾವಿದ್ಯಾ ಆದಿ ಪರಾಶಕ್ತಿಯ ಹತ್ತು ಅವತಾರಗಳ ಹಾಗೂ ಅವಳ ಶಕ್ತಿಯ ಕುರಿತಾದ ಸ್ತೋತ್ರಗಳಾಗಿವೆ. ಮಹಾಕಾಲೀ ಅವತಾರವಾದ ಹತ್ತು ವಿವಿಧ ಶಕ್ತಿ ದೇವತೆಯರ ವರ್ಣನೆಯು ಶ್ರೀ ದಶಮಹಾವಿದ್ಯಾ ಮಂತ್ರಗಳಲ್ಲಿ ಅಡಕವಾಗಿದೆ. ಈ ದೇವತಾ ಆರಾಧನೆಯು ಸಾತ್ತ್ವಿಕ ಸಾಧನಾ ಮಾರ್ಗದ ತಾಂತ್ರಿಕ ಆಚರಣೆಗಳಿಗೆ ಪೂರಕವಾಗಿದೆ. ವಾಮ ಮಾರ್ಗಿಗಳು ದಶಮಹಾವಿದ್ಯಾ ದೇವತೆಯರ ಆರಾಧನೆಯಿಂದ ಶಕ್ತಿಯನ್ನು ಶೀಘ್ರ ಸಿದ್ಧಿ ಪಡೆದು ಲೋಕಕಲ್ಯಾಣದಲ್ಲಿ ಏನು ನೀಡಲಾರರು. ಆದರೆ ನಿಷ್ಠ ಮಾರ್ಗದಲ್ಲಿ ಕ್ರಮ ಬದ್ಧವಾಗಿ ದೇವತಾರಾಧನೆಯಿಂದ ಲೋಕಕಲ್ಯಾಣದ ಮಾರ್ಗ ಸಿದ್ಧಿಯಾಗುವುದನ್ನು ಮಂತ್ರಗಳು ಹೇಳುತ್ತವೆ. ಶ್ರೀ ಸಿಂಹರಿಂದ ಈ ಮಂತ್ರಗಳಿಗೆ ರಚನೆಯಾದ ಚಿತ್ರಗಳು, ದೇವಿಯ ವಿವಿಧ ರೂಪಗಳನ್ನು ಪರಿಚಯಿಸುವುದರೊಂದಿಗೆ– ಪಾರಮಾರ್ಥದ ಅಂಶವನ್ನು ಚಿತ್ರಿಸುತ್ತವೆ. ದೇವಿಯ ಅನುಗ್ರಹವನ್ನು ಪಡೆಯುವಲ್ಲಿ ಭಕ್ತನ ಸಾಫಲ್ಯವನ್ನು ಯಂತ್ರ ರಚನಾ ಕ್ರಮವಾಗಿ, ಬಹು ಸರಳವಾಗಿ ಮತ್ತು ಅರ್ಥಪೂರ್ಣವಾಗಿ ಶ್ರೀ ಸಿಂಹರವರು ರಚಿಸಿದ್ದಾರೆ. ದಶಮಾಹಾವಿದ್ಯಾ ಮಂತ್ರಗಳಲ್ಲಿ ವರ್ಣಿತ ದೇವಿಯರಲ್ಲಿ–ಶ್ರೀ ಕಾಲೀ, ಶ್ರೀ ತಾರಾ, ಶ್ರೀ ಭೈರವಿ, ಶ್ರೀ ಧೂಮಾವತಿ, ಶ್ರೀ ಛಿನ್ನಮಸ್ತಾ, ಶ್ರೀ ತ್ರಿಪುರಾ, ಶ್ರೀ ಭುವನೇಶ್ವರಿ, ಶ್ರೀ ಬಗಲಾಮುಖೀ, ಶ್ರೀ ಮಾತಂಗಿ ಮತ್ತು ಶ್ರೀ ಕಮಲಾತ್ಮಿಕ. ಮಂತ್ರಗಳ ಪ್ರಕಾರ ಪ್ರತಿಯೊಬ್ಬ ದೇವತೆಯರೂ ಒಂದೊಂದು ವಿಶಿಷ್ಟವಾದ ಶಕ್ತಿಯ ಸೆಲೆಯಾಗಿದ್ದ ಸಾಧಕರಿಗೆ ಅನುಗ್ರಹಮಾಡುವವರಾಗಿದ್ದಾರೆ. ಶ್ರೀ ಸಿಂಹರು ಒಂದರ್ಥದಲ್ಲಿ ಚಿತ್ರಗಳ ಮೂಲಕವಾಗಿ ದೇವಿಯ ಸಾಕ್ಷಾತ್ಕಾರ ಮಾಡಿಕೊಂಡಿದ್ದಾರೆ.

### ಭಗವದ್ಗೀತೆಯ ದೃಶ್ಯಾವತರಣಿಕೆಗಳು:

ಶ್ರೀ ಸಿಂಹರವರು ರಚಿಸಿದ ಚಿತ್ರಗಳಲ್ಲಿ, ಆಯ್ದು ಕೆಲವು ಚಿತ್ರಗಳನ್ನು ಭಗವದ್ಗೀತಾ ಪುಸ್ತಕದ ಮುದ್ರಣಕ್ಕಾಗಿ

ಬಳಸಲಾಗಿದೆ. ಸಹಜವಾಗಿ ಬಹಳ ಜನ ಕಲಾವಿದರು ಒಂದೋ ಎರಡೋ ಚಿತ್ರಗಳನ್ನು ಅದರಲ್ಲೂ ಅರ್ಜುನ ಮತ್ತು ಕೃಷ್ಣರ ಸಂವಾದಗಳನ್ನು ಚಿತ್ರಿಸಿರುತ್ತಾರೆ. ಆದರೆ ಈ ಮೊದಲೇ ರಚಿಸಿದ ಚಿತ್ರಗಳನ್ನು ಸಂದರ್ಭೋಚಿತವಾಗಿ ಬಳಸಿಕೊಂಡು ಚಿತ್ರಕಲಾವಿದನ ಕಲಾತ್ಮಕತೆಗೆ ಕೈಗನ್ನಡಿಯಾಗುವುದು ತುಂಬ ವಿರಳ. ಶ್ರೀ ಸಿಂಹ ಅವರು ರಚಿಸಿದ ಪುರುಷ ಸೂಕ್ತದ ಹಾಗೂ ಇನ್ನಿತರ ಚಿತ್ರಗಳ ಆಯ್ದ ಭಾಗಗಳನ್ನು ಭಗವದ್ಗೀತಾ ಪುಸ್ತಕದಲ್ಲಿ ಅತ್ಯಂತ ಅರ್ಥಪೂರ್ಣವಾಗಿ ಬಳಸಿಕೊಳ್ಳಲಾಗಿದೆ. ಈ ಪುಸ್ತಕದ ಮಹತ್ವದ ಕುರಿತು ಸ್ವಲ್ಪದರಲ್ಲಿ ಹೇಳಲೇಬೇಕು. ಈ ಪುಸ್ತಕವು ಸಂಗ್ರಹಕಾರರ ಪುಸ್ತಕ. ಅದರ ವಿನ್ಯಾಸ, ಮುದ್ರಣಕ್ಕೆ ಉಪಯೋಗಿಸಿದ ಹಾಳೆಗಳು– ಅದರ ಒಟ್ಟಾರೆ ವಿನ್ಯಾಸವು ಬಹು ವಿಶಿಷ್ಟವಾದದ್ದು, ತಮಿಳುನಾಡಿನ ಶಿವಕಾಶಿಯ ಶ್ರೀನಿವಾಸ ಫೈನ್ ಆರ್ಟ್ಸ್ ಪ್ರೆಸ್ಸಿನವರು ಈ ಭಗವದ್ಗೀತಾ ಬೃಹತ್ ಪುಸ್ತಕವನ್ನು ಮುದ್ರಿಸುವ ಸಾಹಸ ಮಾಡಿದ್ದಾರೆ. ಕಲಾವಿದನ ಕಲಾಕೃತಿಗಳ ಔಪಯೋಗಿಕತೆಗೆ ಇಲ್ಲಿ ಬಳಸಲಾಗಿರುವ ಶ್ರೀ ಸಿಂಹರ ಕಲಾಕುಸುಮಗಳು ದಾಖಲೆಯಾಗಿವೆ. ಪುಸ್ತಕದ ಒಳ ಪುಟಗಳಲ್ಲಿ ಮತ್ತು ಮೇಲುಹೊದಿಕೆಯಲ್ಲಿ ಶ್ರೀ ಸಿಂಹರ ಚಿತ್ರಗಳನ್ನು ಬಳಸಿಕೊಳ್ಳಲಾಗಿದೆ. ಈ ಪುಸ್ತಕದ ಚಿತ್ರಗಳು ಶ್ರೀ ಸಿಂಹರ ಸೃಜನಶೀಲತೆಗೆ ಮತ್ತು ಕಲಾತ್ಮಕತೆಗೆ ಸಂದ ಗೌರವ ಎನ್ನಬಹುದು. ಈ ಪುಸ್ತಕದ ಪ್ರಕಟಣೆಯಿಂದಾಗಿ ಶ್ರೀ ಸಿಂಹರ ಚಿತ್ರಗಳು ವಿಶ್ವದಾದ್ಯಂತ ಪ್ರಸರಿಸಿವೆ.

ಶ್ರೀ ಸಿಂಹರು ರಚಿಸಿದ ಬಿಡಿ ಕಲಾಕೃತಿಗಳು ಹಲವಾರು ವಸ್ತುಸಂಗ್ರಹಾಲಯಗಳಲ್ಲಿ ಪ್ರದರ್ಶಿಸಲ್ಪಟ್ಟಿವೆ ಮತ್ತು ಅವುಗಳ ಸಂಗ್ರಹಾಗಾರಗಳಲ್ಲಿ ದಾಖಲಾಗಿವೆ. ಬೆಲ್ಜಿಯಮ್‌ದೇಶದ ಪೇಟಿಟ್–ಸೋಮ್ ಪ್ರಾಂತ್ಯದಲ್ಲಿ ರಾಧಾದೇಶ್ ಎಂಬ ಕೃಷ್ಣದೇವಸ್ಥಾನವಾಗಿರುವ ದುರ್ಗದಮನೆಯ (ಕ್ಯಾಝಲ್) ಮ್ಯುಜಿಯಂ ಆಫ್ ಸೇಕ್ರೆಡ್ ಆರ್ಟ್ ವಸ್ತುಸಂಗ್ರಹಾಲಯದಲ್ಲಿ ಶ್ರೀ ಸಿಂಹರ ಹತ್ತು ಕಲಾಕೃತಿಗಳಿವೆ. ರಾಮಾಯಣದ ಕಥನವಾದ ಶಬರಿಯು ರಾಮನ ಭೇಟಿಯಲ್ಲಿ ಅವನಿಗೆ ತಿನ್ನಲು ಹಣ್ಣು ನೀಡುತ್ತಿರುವ ದೃಶ್ಯದ ಚಿತ್ರಣವು ಶ್ರೀ ಸಿಂಹರ ಕಲ್ಪನೆಯಲ್ಲಿ ಮೂಡಿಬಂದಿದೆ. ವಿದುರ–ಕೃಷ್ಣಉಪಚಾರ, ಅರ್ಧನಾರೀಶ್ವರ ಬಾಲಗಣಪತಿ, ಬಾಲಶಂಕರ, ಧರ್ಮಾವತಾರ, ನವನೀತಚೋರ, ಹಯವದನ, ಸಿದ್ಧಿಗಣಪತಿ, ಸರಸ್ವತಿ ಮೊದಲಾದ ಚಿತ್ರಗಳು ಸೇಕ್ರೆಡ್ ಆರ್ಟ್ ಮ್ಯುಜಿಯಮ್ ನಲ್ಲಿ ಸಂಗ್ರಹವಾಗಿವೆ.

## ಮೈಸೂರಿನ ಜಗನ್ಮೋಹನಚಿತ್ರಶಾಲಾ ವಸ್ತು ಸಂಗ್ರಹಾಲಯದಲ್ಲಿ ಶ್ರೀ ಸಿಂಹರ ಕಲಾಕೃತಿಗಳು:

ಜಗನ್ಮೋಹನ ಚಿತ್ರಶಾಲೆ ವಸ್ತುಸಂಗ್ರಹಾಲಯವು ಮೈಸೂರು ರಾಜಮನೆತನದ ಆಳರಸರು ಸಂಗ್ರಹಿಸಿದ ಅಪೂರ್ವ ವಸ್ತುಗಳು, ಅವರಿಗೆ ನೀಡಲ್ಪಟ್ಟ ಪ್ರಶಸ್ತಿಗಳು, ಗೌರವ ಸ್ಮರಣಿಕೆಗಳು, ರವಿವರ್ಮ, ಮೈಸೂರಿನ ಕಲಾವಿದರ ಚಿತ್ರಕೃತಿಗಳು ಹೀಗೆ ಹಲವಾರು ಬಗೆಯ ದೇಶ–ವಿದೇಶಗಳ ಆಪೂರ್ವ ವಸ್ತುಗಳ ಪ್ರದರ್ಶನ–ಭಂಡಾರವಿದೆ. ಇಂತಹ ಸಂಗ್ರಹದ ಜೊತೆಗೆ ಶ್ರೀ ಸಿಂಹರ ಕಲಾಕೃತಿಗಳೂ ಇಲ್ಲಿ ಪ್ರದರ್ಶನಗೊಂಡಿರುವುದು ಅವರಿಗೆ ಸಂದ ಗೌರವವಾಗಿದೆ. ಇಲ್ಲಿರುವ ಇವರ ಎರಡು ಚಿತ್ರಗಳಲ್ಲಿ ಬಹು ಆಕರ್ಷಕವಾಗಿರುವುದು– 'ಸರ್ವ ವ್ಯಾಪಿ' ಎಂಬ ಚಿತ್ರ. ಈ ಚಿತ್ರದಲ್ಲಿ ದೇವನೋರ್ವನು ವಿಶ್ವವನ್ನು ವ್ಯಾಪಿಸಿರುವಂತೆ ಚಿತ್ರಿಸಲಾಗಿದೆ. ಆಕೃತಿಗಳು ಅಸ್ಪಷ್ಟ ಮತ್ತು ಕಲ್ಪನಾತೀತ ಎಂಬಂತಹ ದೃಶ್ಯನಿರೂಪಣೆಯನ್ನು ಹೊಂದಿದೆ. ಈ ಚಿತ್ರದ ಸಂಯೋಜನೆಯಲ್ಲಿ ದೇವನನ್ನು ಸರ್ವವ್ಯಾಪಿಯಾಗಿರುವಂತೆ ಇಡಿಯಾಗಿ ಚಿತ್ರದ ಚೌಕಟ್ಟನ್ನು ಆವರಿಸಿ– ಅವನಿಂದ ಉದ್ಭವಿಸಿರುವ ಕಿರು ಆಕೃತಿಗಳು ಧಾರೆಯಂತೆ ಹೊರಹೊಮ್ಮುವ ಸನ್ನಿವೇಶವನ್ನು ಕಾಣಬಹುದು. ಅಸ್ಪಷ್ಟವಾದ–ಸರ್ರಿಯಲಿಸ್ಟಿಕ್ ಚಿತ್ರದಂತೆ ಕಾಣುವ ಸಂಯೋಜನೆಯಿಂದಾಗಿ ಚಿತ್ರವು ಅತ್ಯಂತ ಭಾವನಾಪರವಶಗೊಳಿಸುವಂತೆ ಕಾಣುತ್ತದೆ. ಇಲ್ಲಿಯೇ ಪ್ರದರ್ಶನಗೊಂಡಿರುವ ಇನ್ನೊಂದು ಚಿತ್ರಕಲಾಕೃತಿ – 'ವಂಚಕ'. ಒಂದು ಸುಭಾಷಿತವನ್ನು ಆಧರಿಸಿ ರಚಿತವಾಗಿರುವ ಈ ಚಿತ್ರದಲ್ಲಿ ಒಬ್ಬ ವಂಚಕನ ಮಾತುಗಳುವಿಷಸರ್ಪ, ಚೇಳು ಮತ್ತು ವಿಷದುಂಬಿಗಳ ಕಡಿತದಂತೆ ಮಾರಣಾಂತಿಕವಾಗಿದ್ದು ಅವುಗಳಿಂದ ಎಚ್ಚರವಾಗಿರಬೇಕು ಎಂಬುದನ್ನು ಮಾರ್ಮಿಕವಾಗಿ ದೃಶ್ಯರೂಪದಲ್ಲಿ ತೋರಿಸಿದ್ದಾರೆ.

ಮೈಸೂರಿನ ಒಬ್ಬರ ಖಾಸಗಿ ಸಂಗ್ರಹದಲ್ಲಿ ಸಿಂಹರು ರಚಿಸಿರುವ ವಾಸ್ತುಚಿತ್ರಗಳು ವಿಶೇಷವಾಗಿವೆ. ಲಲಿತಮಹಲ್‌ನ ಪ್ರಕೃತಿ ಚಿತ್ರವನ್ನು ಬಹು ಸುಂದರವಾಗಿ ರಾತ್ರಿಯ ಚಂದಿರನ ಬೆಳಕಲ್ಲಿ ಮಿಂದೆದ್ದಹಾಗೆ ಚಿತ್ರಿಸಿದ್ದಾರೆ. ಅದೇ ರೀತಿಯಾಗಿ ಜಗನ್ಮೋಹನ ಅರಮನೆಯ ಮುಂಭಾಗವನ್ನು ಕೂಡ ಶ್ರೀ ಸಿಂಹ ಬಹು ಪರಿಪೂರ್ಣವಾದ ಚಿತ್ರವನ್ನಾಗಿ ರಚಿಸಿದ್ದಾರೆ.

ಪ್ರಕೃತಿ ಚಿತ್ರಗಳು, ಲಲಿತಮಹಲ್ ಹಾಗೂ ಜಗನ್ಮೋಹನ ಅರಮನೆಗಳ ಸುಂದರ ವಾಸ್ತು ಚಿತ್ರಣಗಳು ಹಾಗೂ ಬಹು ಸುಂದರವಾದ ದೇವತಾ ಚಿತ್ರಗಳನ್ನು ಸಿಂಹ ಇಲ್ಲಿ ರಚಿಸಿನೀಡಿದ್ದಾರೆ.

ಶ್ರೀ ಸಿಂಹ-ಅನ್ವಯಿಕಲಾವಿದನಾಗಿ- ಅಂದರೆ ವಿನ್ಯಾಸಗಾರ ನಾಗಿ ಹಲವಾರು ಪುಸ್ತಕಗಳಿಗೆ, ಪತ್ರಿಕೆಗಳಿಗೆ, ಕಾದಂಬರಿ-ಕಥೆಗಳಿಗೆ ಚಿತ್ರ ರಚಿಸಿದ್ದಾರೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ-ಪ್ರತಿಯೊಂದು ಚಿತ್ರವೂ ಒಂದೊಂದು ಕಲಾಕೃತಿಯಾಗಿರುವುದು. ಅಂದರೆ-ಈ ವಿನ್ಯಾಸಗಳ ವಿಸ್ತಾರ ಕೇವಲ ಪತ್ರಿಕೆಗಳ ರಕ್ಷಾಪುಟಕ್ಕೆ ಸೀಮಿತವಾಗಿರದೇ ಅದನ್ನು ಮೀರಿ ಸ್ವತಂತ್ರವಾದ ಕಲಾಕೃತಿಯಂತೆ ಬಿಂಬಿತವಾಗಿದೆ. ಭಾಷಾತೀತವಾಗಿ ಕನ್ನಡ, ತೆಲಗು, ಮಲಯಾಳಮ್, ಇಂಗ್ಲೀಷ್ ಮೊದಲಾದ ಭಾಷೆಯಲ್ಲಿ ತಮ್ಮ ಕಲಾನೈಪುಣ್ಯತೆ ತೋರಿಸುತ್ತಕಲಾವಿದನು ಎಲ್ಲ ಭಾಷೆ- ಧರ್ಮ ಮತ್ತು ಭೌಗೋಳಿಕ ವ್ಯಾಪ್ತಿಯನ್ನು ಮೀರಿದವನೆಂಬುದನ್ನು ಸಾಬೀತುಗೊಳಿಸಿದ್ದಾರೆ. ಅವರ ರಚನೆಯ ಆಂಧ್ರಪ್ರಭ, ಕಲೈ ಮಗಳ್ ಮಲಾರ್, ಕಣ್ಣನ್ ಮಲಾರ್, ಮಯೂರ, ಸುಧಾ ಪತ್ರಿಕೆಗಳಿಗೆ ರಚಿಸಿದ ರಕ್ಷಾಪುಟದ ಕಲಾಕೃತಿಗಳು ಗಮನ ಸೆಳೆಯುತ್ತವೆ.

ಶ್ರೀ ಸಿಂಹರಿಗೆ ಅವರ ಸಾಧನೆಯನ್ನು ಗಮನಿಸಿ-ಪರಿಗಣಿಸಿ ನೀಡಿದಂತಹ ಪ್ರಶಸ್ತಿಗಳು ಹಲವಾರು. ಈ ಮೊದಲೇ ಹೇಳಿದಂತೆ ಬಹು ಸಂಕೋಚ ಸ್ವಭಾವದ ಕಲಾವಿದರಾದ ಅವರು ಯಾವತ್ತು ಪ್ರಶಸ್ತಿಯನ್ನು ಹುಡುಕಿಕೊಂಡು ಹೋಗಿಲ್ಲ. ಸಂಘ ಸಂಸ್ಥೆಗಳವರು ಶ್ರೀ ಸಿಂಹರ ಕಲಾಸಾಧನೆಯನ್ನು ಪ್ರಶಸ್ತಿಗಳನ್ನು ನೀಡುವ ಮೂಲಕವಾಗಿ ಸನ್ಮಾನಿಸಿದ್ದಾರೆ. ರೋಟರಿ ರಾಮ್‌ಸನ್ಸ್ ಕಲಾ ಪ್ರತಿಷ್ಠಾನ ಪ್ರಶಸ್ತಿ, ಕೆ.ಎಂ.ವೀರಪ್ಪ ಪ್ರಶಸ್ತಿ, ಡಾ.ಮಿಣಜಗಿ ಕಲಾ ಸಮ್ಮಾನ್, ಹಾಗೂ ಕಳೆದ ವರ್ಷ ಬಂದಂತಹ ರಾಜ್ಯೋತ್ಸವ ಸನ್ಮಾನಗಳು ಮುಖ್ಯವಾದವುಗಳು.

ಸಮಕಾಲೀನ ಕಲಾ ಸನ್ನಿವೇಶದಲ್ಲಿ ಶ್ರೀ ಸಿಂಹರನ್ನು ಅಜಾತಶತ್ರು ಎಂದು ಹೇಳಬಹುದು. ಏಕೆಂದರೆ ಚಿತ್ರಕಲೆಯಲ್ಲಿನ ಇಂದಿನ ಹೊಸ ಪ್ರಯೋಗಗಳನ್ನು ತೆಗಳದೇ ಮತ್ತು ತಮ್ಮ ಕಲಾಕೃತಿಗಳಲ್ಲಿ ಅದನ್ನು ಸಂಪೂರ್ಣವಾಗಿ ಅಳವಡಿಸಿಕೊಳ್ಳದೇ ತಮ್ಮದೇ ಆದರೀತಿಯಲ್ಲಿ ಹೊಸತನವನ್ನು ರೂಢಿಸಿಕೊಂಡು ಕಲಾಕೃತಿಗಳಿಗಳಿಗೆ ಜೀವ ತುಂಬಿದ್ದಾರೆ. ಜಿ.ಎಲ್.ಎನ್.ಸಿಂಹ – ಮೈಸೂರಿನ ಅಭಿಜಾತ ಕಲಾವಿದರಲ್ಲಿ ಒಬ್ಬರು. ಮೈಸೂರಿನ ಕಲೆ ಮತ್ತು ಧಾರ್ಮಿಕ ಸಂಪ್ರದಾಯದಲ್ಲಿಯೇ ಬೆಳೆದು- ತಮ್ಮದೇ ಆದಂತಹ ಭಾರತೀಯ ಪಾರಂಪರಿಕ ಚಿತ್ರ ಸಂಪ್ರದಾಯವನ್ನು ಅಭಿವೃದ್ಧಿಪಡಿಸಿ ಹೆಚ್ಚು ಪ್ರಚಾರವಿಲ್ಲದೇ ಋಷಿಯಂತೆ ನಿತ್ಯ ನಿರಂತರವಾಗಿ ಕಲಾಕೃಷಿ ಮಾಡುತ್ತಿದ್ದಾರೆ. ಶ್ರೀ ಸಿಂಹ, ಪ್ರಶಸ್ತಿಗಳು ಬಂದಾಗ ಹಿಗ್ಗದೆ- ಬರದೆ ಇದ್ದಾಗ ಕುಗ್ಗದೆ ತಮ್ಮದೇ ಆದಂತಹ ಕಲಾಲೋಕವನ್ನು ಕಟ್ಟಿಕೊಂಡು ಕಲಾಕೃತಿಗಳ ಕಲ್ಪನೆಗಳಿಗೆ ಜೀವನೀಡುವ ಕಲಾಕಾಯಕಯೋಗಿಯಾಗಿದ್ದಾರೆ.




*ತಮಿಳು ವಾರಪತ್ರಿಕೆಯೊಂದರ ದೀಪಾವಳಿ ಸಂಚಿಕೆಯ ಮುಖಪುಟ, 1966.*

ಶ್ರೀ ಜಿ.ಎಲ್.ಎನ್.ಸಿಂಹ ಅವರ ಕಲಾಕೃತಿಗಳ ಹಲವು ಏಕವ್ಯಕ್ತಿ ಚಿತ್ರ ಪ್ರದರ್ಶನಗಳನ್ನು ಮಾಡಿದ್ದು ಮಾಹಿತಿಗಾಗಿ ಈ ಕೆಳಗೆ ಅವುಗಳ ಒಂದು ಪರಿಚಯ ನೀಡಲಾಗಿದೆ.

## ಪ್ರದರ್ಶನಗಳು

1. **1–6 ಮೇ2002: ವೇದಕಲಾ ಏಕವ್ಯಕ್ತಿ ಪ್ರದರ್ಶನ, ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು.**
2. **16–30 ಜೂನ್ 2002: ವೇದಕಲಾ ಏಕವ್ಯಕ್ತಿ ಪ್ರದರ್ಶನ, ಗ್ಯಾಲರಿ ಕಲಾಕುಂಜ್. ಮೈಸೂರು**
3. **20–29 ಮೇ 2011: ದಿವ್ಯ ವರ್ಣ. ಏಕವ್ಯಕ್ತಿ ಪ್ರದರ್ಶನ ಪ್ರತಿಮಾ ಗ್ಯಾಲರಿ. ಮೈಸೂರು**
4. **25–31 ಮೇ 2012 : ಸ್ಪಿರಿಟ್ ಆಫ್ ದ ಏಜ್, ಸಬ್ ರಂಗ್ ಆರ್ಟ್ ಗ್ಯಾಲರಿ ಮೈಸೂರು**
5. **26–30 ಮೇ 2013 : ಕುಂಚ ಬ್ರಹ್ಮ ಡಾ.ಎಂ.ವಿ.ಮಿಣಜಗಿ ಮೊದಲ ಅಖಿಲ ಭಾರತ ಕಲಾ ಪ್ರದರ್ಶನ. ಸರ್ಕಾರಿ ಆರ್ಟ್ ಗ್ಯಾಲರಿ. ಧಾರವಾಡ**
6. **13–ಏಪ್ರಿಲ್, 2014 : ಮಂತ್ರ ಮುಕುರ: ಏಕವ್ಯಕ್ತಿ ಕಲಾಪ್ರದರ್ಶನ–ಹಾಗೂ ಉಪನ್ಯಾಸ. (ಉಪನ್ಯಾಸಕರು:ಡಾ. ಎಸ್.ಆರ್.ರಾಮಸ್ವಾಮಿ, ಪ್ರಧಾನ ಸಂಪಾದಕರು, ಉತ್ಥಾನ ಮಾಸಪತ್ರಿಕೆ, ಬೆಂಗಳೂರು) ಪ್ರತಿಮಾ ಗ್ಯಾಲರಿ ಮೈಸೂರು**
7. **23 ಅಗಸ್ಟ್, 2017 : ಶಾಸ್ತ್ರೀಯ ಮತ್ತು ವೈಜ್ಞಾನಿಕ ಹಿನ್ನೆಲೆಯಲ್ಲಿ ಶ್ರೀ ಸೂಕ್ತ ಮತ್ತು ಪುರುಷ ಸೂಕ್ತ– ಒಂದು ದಿನದ ರಾಷ್ಟ್ರೀಯ ವಿಚಾರ ಸಂಕಿರಣ. ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯ ಹಾಗೂ ಸಂಸ್ಕೃತ ಸಂಶೋಧನ ಸಂಸತ್, ಮೇಲುಕೋಟೆ.**

## ಪ್ರಶಸ್ತಿ–ಸನ್ಮಾನಗಳು

ಶ್ರೀ ಜಿ.ಎಲ್.ಎನ್.ಸಿಂಹ ಅವರ ಕಲಾಕೃತಿಗಳ ಮತ್ತು ಅವರ ಕಲಾಕೃಷಿಯನ್ನು ಗುರುತಿಸಿ ಹಲವಾರು ಸಂಘ– ಸಂಸ್ಥೆಗಳವರು, ಕರ್ನಾಟಕ ಲಲಿತಕಲಾ ಅಕಾಡೆಮಿ, ರಾಮ್‌ಸನ್ಸ್ ಕಲಾಪ್ರತಿಷ್ಠಾನ, ಪ್ರಶಸ್ತಿ ನೀಡಿ ಗೌರವಿಸಿವೆ. ತೀರ ಇತ್ತೀಚಿಗೆ ದೊರೆತ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯು ಅವರ ಜೀವಮಾನದ ಸಾಧನೆಗಾಗಿ ದೊರೆತಂತಹ ಸಮ್ಮಾನಗಳಲ್ಲಿ ಒಂದು. ಅವುಗಳ ಒಂದು ಪಟ್ಟಿಯನ್ನು ಮಾಹಿತಿಗಾಗಿ ಇಲ್ಲಿ ನೀಡಿದೆ.

1. 1955–56 : ಸಿ.ಟಿ.ಐ ಯುವ ಪ್ರತಿಭಾ ಪುರಸ್ಕಾರ. ಕೆ.ಎಂ.ವೀರಪ್ಪ ಸ್ಥಾಪಿಸಿದ ಬೆಳ್ಳಿಬಟ್ಟಲು ಪ್ರಶಸ್ತಿ
2. 1999 ಅಕ್ಟೋಬರ್: ದಸರಾ ವಸ್ತು ಪ್ರದರ್ಶನ ಪ್ರಶಸ್ತಿ
3. 25–ಡಿಸೆಂಬರ್ 2001: ಸಂಸ್ಕಾರ ಭಾರತೀ ಸನ್ಮಾನ
4. 26 ನೆಯ ಜೂನ್ 2003 : ರೋಟರಿ ರಾಮ್‌ಸನ್ಸ್ ಕಲಾ ಪ್ರತಿಷ್ಠಾನ ಪ್ರಶಸ್ತಿ, ಮೈಸೂರು.
5. 2 ನೆಯ ಮಾರ್ಚ್. 2004 : 2003 ನೇ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ, ಬೆಳಗಾವಿ.
6. 11 ನೆಯ ನವಂಬರ್ 2004 : ಕೆ.ಎಂ.ವೀರಪ್ಪ ಸ್ಮಾರಕ ಪ್ರಶಸ್ತಿ, ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರು.
7. 5 ನೆಯ ಫೆಬ್ರವರಿ 2011. ಕುಂಚಕಲಾ ತಪಸ್ವಿ ತಿಪ್ಪಾಜಿ ಪ್ರಶಸ್ತಿ,ತಿಪ್ಪಾಜಿ ಚಿತ್ರಗಾರ್ ಆರ್ಟ್ ಫೌಂಡೇಷನ್, ಶಿವಮೊಗ್ಗ.
8. 15 ನೆಯ ಮೇ 2011. ಎಂ.ಟಿ.ವಿ ಆಚಾರ್ಯ ಪ್ರಶಸ್ತಿ, ಆಚಾರ್ಯ ಚಿತ್ರಕಲಾ ಭವನ, ಮೈಸೂರು.
9. 26 ನೆಯ ಮೇ 2013. ಕುಂಚಬ್ರಹ್ಮ ಡಾ.ಎಂ.ವಿ.ಮಿಣಜಗಿ ಪ್ರಶಸ್ತಿ. ಚಿತ್ರ ಸಂಗಮ ಕಲಾ ಸಂಸ್ಕೃತಿ ಅಕಾಡೆಮಿ, ಹುಬ್ಬಳ್ಳಿ.
10. 19 ನೆಯ ಡಿಸೆಂಬರ್ 2015 : ವನಮಾಲಿ ಸೇವಾ ಪ್ರಶಸ್ತಿ. ವನಮಾಲಿ ಸೇವಾ ಪ್ರತಿಷ್ಠಾನ. ಮೈಸೂರು.
11. 13 ನೆಯ ಸೆಪ್ಟಂಬರ್ 2016: ಚಿತ್ರ ಸಿರಿ, ಆಳ್ವಾಸ್ ಶಿಕ್ಷಣ ಸಂಸ್ಥೆಗಳು, ಮೂಡಬಿದ್ರೆ
12. 27 ನೆಯ ಸೆಪ್ಟೆಂಬರ್ 2017 : ಹಿರಿಯ ಕಲಾವಿದ ಸನ್ಮಾನ, ಮೈಸೂರು ದಸರಾ ಮಹೋತ್ಸವ, ಲಲಿತಕಲೆ ಮತ್ತು ಕರಕುಶಲಕಲೆ ಉಪಸಮಿತಿ. ಮೈಸೂರು.
13. 1 ನೆಯ ನವೆಂಬರ್ 2017 :2017–18 ನೆ ಸಾಲಿನ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಬೆಂಗಳೂರು.

## ಶ್ರೀ ಸಿಂಹರವರ ಕಲಾಕೃತಿಗಳ ಸಂಗ್ರಹ

1. ಜಗನ್ಮೋಹನ ಚಿತ್ರ ಶಾಲೆ, ಮೈಸೂರು
2. ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು(ಸುಮಾರು 140 ಕಲಾಕೃತಿಗಳು)
3. ಮ್ಯುಜಿಯಮ್ ಆಫ್ ಸೇಕ್ರೆಡ್ ಆರ್ಟ್ಸ್, ರಾಧಾದೇಶ್, ಬೆಲ್ಜಿಯಮ್
4. ಮಹಾರಾಜಕುಮಾರಿ ಶ್ರೀಮತಿ ಮೀನಾಕ್ಷಿದೇವಿಯವರು, ಬೆಂಗಳೂರು
5. ಮಹಾರಾಜಕುಮಾರಿ ಶ್ರೀಮತಿ ಇಂದ್ರಾಕ್ಷಿದೇವಿಯವರು, ಬೆಂಗಳೂರು
6. ದಿ. ಶ್ರೀಮತಿ ಚಂದ್ರಪ್ರಭಾ ಅರಸ್, ಬೆಂಗಳೂರು
7. ಶ್ರೀಮತಿ ಭಾನುಮತಿದೇವಿ. ಅರಸ್ ಕಾರ್ ಸರ್ವೀಸ್. ಮೈಸೂರು.
8. ಹಿಂದೂಯಿಜಮ್ ಟುಡೆ. ಶೈವ ಸಿದ್ಧಂತ ದೇವಾಲಯ. ಕವಾಈ. ಹವಾಯ್.
9. ರಾಯಲ್ ಇನ್. ಮೈಸೂರು.
10. ಡಾ. ಮಾಯಾ ಸೀತಾರಾಮ್. ಮೈಸೂರು.
11. ಡಾ.ವೆಂಕಟರಾಮ್. ಯು.ಕೆ. ಮೈಸೂರು.
12. ಶ್ರೀ ವೈದ್ಯನಾಥನ್. ಮೈಸೂರು



*ಶ್ರೀ ಮಹಿಷಮರ್ದಿನೀ, 2006, 61–46 ಸೆ.ಮೀ. ಸಂಗ್ರಹ: ರಾಮ್‌ಸನ್ಸ್ ಕಲಾ ಪ್ರತಿಷ್ಠಾನ, ಮೈಸೂರು.*

# ಟಿಪ್ಪಣಿಗಳು, ಆಧಾರ ಮತ್ತು ಆಕರಗಳು

## ಟಿಪ್ಪಣಿಗಳು

1. ಕಲಾವಿದ ಶ್ರೀ ಸಿಂಹ ಹೇಳುವಂತೆ ಶೈಲಿ ಕಲಾವಿದನ ವಯಕ್ತಿವಾದ ರಚನಾ ವಿಧಾನವಾಗಿದೆ. ಸಾಮಾನ್ಯವಾಗಿ ಒಂದೇ ತರಹದ ರೀತಿ-ರೀವಾಜಿನಲ್ಲಿ, ಮೈವಳಿಕೆಯಲ್ಲಿ, ವರ್ಣ ವಿನ್ಯಾಸದಲ್ಲಿನ ಅನುರೂಪತೆಗಳನ್ನು ಗಮನಿಸಿ ಶೈಲಿಯ ವರ್ಗೀಕರಣವಾಗುತ್ತದೆ. ಪಾಶ್ಚ್ಯಾತ್ಯರಲ್ಲಿ ರೆನೇಸಾನ್ಸ, ಬಾರೋಕ್ ಮೊದಲಾದ ಚಿತ್ರ-ಶಿಲ್ಪ ಪಂಗಡಗಳು ಶೈಲಿ ಆಧಾರಿತವೆ ಆಗಿವೆ. ಹಾಗೆ ನಮ್ಮ ಮೈಸೂರು ಸಾಂಪ್ರದಾಯಕ ಚಿತ್ರಗಳಲ್ಲಿನ ಶೈಲಿಯೂ ಕೂಡಾ ಬಹುತೇಕ ಒಂದೆ ತೆರನಾದ ಮೈವಳಿಕೆಯನ್ನು ಹೊಂದಿರುವದರಿಂದ ಶೈಲಿಯಂದು ವರ್ಗೀಕರಿಸಬಹುದು. ಆದರೆ ಭಾರತೀಯ ಸಾಂಪ್ರದಾಯಕ ಶೈಲಿ ಯನ್ನು ಗುರುತಿಸುವ ಪ್ರಯತ್ನದಲ್ಲಿ ಪ್ರಾಯಃ ಮಿನಿಯೇಚರ್ ಚಿತ್ರಗಳ ಆಧಾರದಿಂದ ನಿರ್ದರಿಸಬಹುದು. ಇದನ್ನೇ ಶ್ರೀ ಸಿಂಹ ತಮ್ಮ ಕಲಾಕೃತಿಗಳಲ್ಲಿ ಸ್ವಲ್ಪ ವಯಕ್ತಿಕವಾಗಿ-ವಿಭಿನ್ನವಾಗ್ ಅಳವಡಿಸಿಕೊಂಡಿರುವುದರಿಂದ ಅವರದೇ ಶೈಲಿಯ ಅನಾವರಣವೆನ್ನುತ್ತಾರೆ.

2. ಮೈಸೂರಿನಲ್ಲಿಯ ಚಿತ್ರಕಲೆಯ ಕುರಿತಾಗಿ ಸಾಕಷ್ಟು ವಿವರವಾಗಿ ಪ್ರಸ್ತುತ ಲೇಖಕರು ಸಾಕಷ್ಟು ಸಂಶೋಧನೆ ನಡೆಸಿ ಲೇಖನಗಳನ್ನು ಪ್ರಕಟಿಸಿದ್ದಾರೆ:

ಅ) ಮೈಸೂರಿನಲ್ಲಿಯ ಭಿತ್ತಿ ಚಿತ್ರಕಲೆ- ಮೈಸೂರು ದರ್ಶನ-2012. ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯದ ಪ್ರಕಟಣೆ. ಆ) ಮೈಸೂರಿನ ಪ್ರಸನ್ನ ವೆಂಕಟರಮಣ ಸ್ವಾಮಿ ದೇವಾಲಯದ ಭಿತ್ತಿ ಚಿತ್ರಗಳು.-ಒಂದು ವಿಶ್ಲೇಷಣೆ, ವಿಜಯನಗರ ಅಧ್ಯಯನ-9, 2004. ಮೈಸೂರು

ಇ) ಮೈಸೂರಿನ ದೇವಾಲಯಗಳಲ್ಲಿ ಭಿತ್ತಿಚಿತ್ರಗಳು ಮತ್ತು ಅವುಗಳ ಮೇಲೆ ವಿಜಯನಗರ ಚಿತ್ರ ಶೈಲಿಯ ಪ್ರಭಾವ. ವಿಜಯನಗರ ಅಧ್ಯಯನ-2, 1997. ಮೈಸೂರು, ಅಲ್ಲದೇ ಹಲವಾರು ವಿಶೇಷ ಉಪನ್ಯಾಸಗಳಲ್ಲಿ ಮೈಸೂರಿನ ಪಾರಂಪರಿಕ ಕಲೆಯ ಕುರಿತು ಬೆಳಕು ಚೆಲ್ಲಲಾಗಿದೆ.

3. ಮೈಸೂರಿನಲ್ಲಿ ಆಡಳಿತ ಯಂತ್ರವನ್ನು ಚಾಮರಾಜ ವಡೆಯರವರು ಹಿಡಿದಮೇಲೆ ಅವರ ದಿವಾನರುಗಳ ಸಹಾಯದಿಂದ ಮಹಾರಾಜರು ಸಾಕಷ್ಟು ಅಭಿವೃದ್ಧಿಕಾರ್ಯಗಳಲ್ಲಿ ಮುಂದಾದರು. ಅದರಲ್ಲಿ ಶೈಕ್ಷಣಿಕ ಕ್ಷೇತ್ರಕ್ಕೆ ಹೆಚ್ಚಿನ ಒತ್ತು ನೀಡಿದ್ದು ದಾಖಲೆಯಾಗಿದೆ. 1892 ರಲ್ಲಿಯೇ ಕೈಗಾರಿಕಾ ತರಬೇತಿ ಸಂಸ್ಥೆಯ ಅಸ್ತಿಭಾರ ಹಾಕಿದ್ದು ಅಂದು ದಿವಾನ್ ಕೆ.ಶೇಶಾದ್ರಿ ಅಯ್ಯರವರ ದೂರದೃಷ್ಟಿಯಿಂದಾಗಿ. ನಂತರ ರಾಜರ್ಷಿನಾಲ್ವಡಿ ಕೃಷ್ಣರಾಜ ವಡೆಯರವರ ಮತ್ತು ದಿವಾನ್ ಮಾಧವರಾವ್ ಅವರ ಕಾಲದಲ್ಲಿ ಕೈಗಾರಿಕಾ ತರಬೇತಿ ಕೇಂದ್ರ ಚಾಮರಾಜೇಂದ್ರ ತಾಂತ್ರಿಕ ಶಾಲೆಯಾಗಿ ಬದಲಾವಣೆಯಾಯಿತು. ಚಿತ್ರ ಶಾಲೆಯಲ್ಲಿ ತರಬೇತಿ ಪಡೆದ ಹಲವಾರು ಕಲಾವಿದರನ್ನು ಆಗ ನಿರ್ಮಾಣವಾಗುತ್ತಿದ್ದ ಮೈಸೂರು ಅರಮನೆಯ ಅಲಂಕರಣದಲ್ಲಿ ಕೆಲಸಮಾಡಲು ಅವಕಾಶಕಲ್ಪಿಸಲಾಗಿತ್ತು. ನಂತರದಲ್ಲಿ ಅವರಲ್ಲಿ ಕೆಲವರು ಶಾಲೆಯಲ್ಲಿ ಅಧ್ಯಾಪಕರಾಗಿಯೂ ಕೆಲಸಮಾಡಿದ್ದಾರೆ.

4. ಕೆ.ಕೆ.ಹೆಬ್ಬಾರ್ ಅವರು ಸಿ.ಟಿ.ಐ ನಲ್ಲಿ ಅಧ್ಯಾಪಕರಾಗಿದ್ದ ಶ್ರೀ ಪಾವಂಜೆ ಯವರ ಸಂಬಂಧಿ. ಹೆಬ್ಬಾರ್ ಆರಂಭದಲ್ಲಿ ಸಿಟಿಐ ನಲ್ಲಿ ವಿದ್ಯಾರ್ಥಿಯಾಗಿ ಸೇರಿದ್ದರು ನಂತರ ಕಾರಣಾಂತರದಿಂದ ಅಲ್ಲಿ ತಮ್ಮ ಕೋರ್ಸನ್ನು ಪೂರ್ತಿಗೊಳಿಸದೇ ಮುಂಬೈನ ಜೆ.ಜೆ.ಸ್ಕೂಲ್ ಆಫ್ ಆರ್ಟ್ ನಲ್ಲಿ ಅಭ್ಯಾಸ ಮುಂದುವರೆಸಿದರು. -ನೋಡಿ. ಕಟ್ಟಂಗೇರಿ ಕೃಷ್ಣ ಹೆಬ್ಬಾರ್- ಕು.ಶಿ.ಹರಿದಾಸ ಭಟ್ಟ, ಉಡುಪಿ
5. ಭಾರತೀಯ ಪಾರಂಪರಿಕ ಚಿತ್ರಕಲೆಯ ಮೂಲ ಸೆಲೆಗಳಾದ ಚಿತ್ರ ಸೂತ್ರ, ಚಿತ್ರ ಷಡಂಗಗಳು, ಮಾನಸೋಲ್ಲಾಸದ ಭಿತ್ತಿ ಚಿತ್ರ ರಚನಾ ಭಾಗ, ಶ್ರೀತತ್ವ ನಿದಿ ಮೊದಲಾದ ಕೃತಿಗಳು ಚಿತ್ರ ರಚನೆ ಮೂಲ ಆಕರ ಗ್ರಂಥಗಳಾಗಿವೆ.
6. ಶ್ರೀ ಸಿಂಹರ ಚಿತ್ರದಲ್ಲಿನ ಪಾತ್ರಗಳಲ್ಲಿ ಶ್ರೀ ರಾಮಕೃಷ್ಣ ಪರಮಹಂಸ, ಗೌತಮ ಬುದ್ಧ ಮೊದಲಾದ ಐತಿಹಾಸಿಕ ದಾರ್ಶನಿಕ ವ್ಯಕ್ತಿಗಳನ್ನು ಚಿತ್ರಗಳಾಗಿ ಅತ್ಯಂತ ಅರ್ಥಪೂರ್ಣವಾಗಿ ದುಡಿಸಿಕೊಂಡಿದ್ದಾರೆ. ಪ್ರಸ್ತುತ ಚಿತ್ರದಲ್ಲಿನ ದಾರ್ಶನಿಕ ಪಾತ್ರದಲ್ಲಿ ರಾಮಕೃಷ್ಣರನ್ನು ಬಿಂಬಿಸಿರುವುದು- ಸಿಂಹರ ಮನದಾಳದಲ್ಲಿನ ಅವರ ಕುರಿತಾಗಿ ಇರುವ ನಂಬಿಕೆ ಮತ್ತು ಅವರ ಸಾಹಿತ್ಯದ ಅರಿವನ್ನು ಸೂಚಿಸುತ್ತದೆ.
7. ದಿ. ಕಮಲೇಶ್, ಡಾ.ಬಿ ಎಸ್.ಕೆ ವರ್ಮ ಮತ್ತು ಶ್ರೀ ಚಂದ್ರನಾಥ ಆಚಾರ್ಯರು ಶ್ರೀ ಸಿಂಹರ ಹಾಗೆ ಚಿತ್ರಗಳನ್ನು ರಚಿಸದಿದ್ದರೂ ಅವರ ಚಿತ್ರಗಳು ಅಂದಿನ ಕಾಲದಲ್ಲಿ ಹೊಸ ಅಲೆಯನ್ನೇ ಸೃಷ್ಟಿಸಿದ್ದವು. ಹೆಚ್ಚು ಶೃಂಗಾರಮಯವಾದ-ರಸವತ್ತಾದ ಶೈಲಿಯನ್ನು ಅಳವಡಿಸಿ- (ನಿಯೋ-ರೋಮ್ಯಾಂಟಿಕ್) ಚಿತ್ರ ರಚನೆ ಮಾಡಿದ್ದಾರೆ. ಅವರುಗಳ ಜೊತೆಯಲ್ಲಿಯೇ ಶ್ರೀ ಜಯದೇವ ಅವರು ಸಾಂಕೇತಿಕತೆ- ಯಂತ್ರಗಳನ್ನು ಜೀವಾಳವಾಗಿಸಿ ಉಪನಿಷತ್ತು ಮತ್ತು ಸೂಕ್ತಗಳಿಗೆ ದೃಶ್ಯ ರಚನೆಮಾಡಿದ್ದಾರೆ. ಆದರೆ ಇವರುಗಳಂತೆಯೇ ಪಾರಂಪರಿಕ ವಸ್ತುಗಳನ್ನು ದೃಶ್ಯೀಕರಿಸುವ ಶ್ರೀ ಸಿಂಹ ತಮ್ಮ ಚಿತ್ರ ಸಂಯೋಜನೆಯಲ್ಲಿ ನೈಜತೆಯ ಉತ್ಪ್ರೇಕ್ಷೆಯಂಬಂತೆ( ಸರ್ರರಿಯಲಿಸ್ಟಿಕ್) ಆಕೃತಿಗಳನ್ನು ರೂಪಿಸಿದ್ದಾರೆ.

## ಆಧಾರ ಮತ್ತು ಆಕರಗಳು


1. ಕಲಾವಿದ ಶ್ರೀ ಜಿ.ಎಲ್.ಎನ್ ಸಿಂಹರೊಡನೆ ಲೇಖಕರ ಸಂದರ್ಶನ-ಚರ್ಚೆ
2. ಶ್ರೀ ಆರ್.ಜಿ.ಸಿಂಗ್ ರೊಡನೆ ಸಂದರ್ಶನ-ಚರ್ಚೆ
3. ಪುರುಷ ಸೂಕ್ತ ಕಲಾಕಾರನ ದೃಷ್ಟಿಯಲ್ಲಿ, ಪ್ರಜಾವಾಣಿ ದೀಪಾವಳಿ ವಿಶೇಷಾಂಕ. 2002, ಪು:53-60
4. ಸಮೃದ್ಧಿಯನ್ನು ಸದಾ ಆಹ್ವಾನಿಸುವ ಶ್ರೀ ಸೂಕ್ತ, ಲೇ.ಕೆ.ರತ್ನಾಕರ ಭಟ್ಟ, ಚಿತ್ರಗಳು: ಶ್ರೀ ಜಿ.ಎಲ್.ಎನ್.ಸಿಂಹ.ಉದಯವಾಣಿ, ದೀಪಾವಳಿ ವಿಶೇಷಾಂಕ-2002, ಪು:85-100
5. ಆರ್.ಜಿ.ಸಿಂಗ್- ಸ್ಪಿರಿಚುಅಲ್ ಪೇಂಟಿಂಗ್ಸ್ ಆಫ್ ಜಿ.ಎಲ್.ಸಿಂಹ
6. ಋಗ್ವೇದದ ಸೂಕ್ತಗಳು: ಪುರುಷ ಸೂಕ್ತ, ಶ್ರೀ ಸೂಕ್ತ, ಅಂಭೃಣೀ ಸೂಕ್ತ, ರುದ್ರ ಸೂಕ್ತ, ಮೂಲ ಮಂತ್ರಗಳನ್ನು ಚಿತ್ರಗಳ ದೃಷ್ಟಿಯಿಂದ ಪರಾಮರ್ಶಿಸಲಾಗಿದೆ.



ಎಡದಿಂದ ಬಲಕ್ಕೆ: ಶ್ರೀಮತಿ ರೂಪಾ (ಮಗಳು), ಶ್ರೀ ಜಿ.ಎಲ್.ಎನ್. ಸಿಂಹ, ಶ್ರೀಮತಿ ಪ್ರೇಮಾ ಸಿಂಹ (ಪತ್ನಿ) ಮತ್ತು ಶ್ರೀ ರವಿ (ಮಗ). ೧೬-೦೬-೨೦೦೩. ಕಳಲೆ.

L to R: Smt. Roopa (daughter) , Sri G.L.N. Simha, Smt. Prema Simha (wife) and Sri Ravi (son). 16-06-2003. Kalale.



ಎಡದಿಂದ ಬಲಕ್ಕೆ: ಶ್ರೀ ಎಂ.ಬಿ. ಸಿಂಗ್, ಶ್ರೀಮತಿ ಪ್ರೇಮಾ ಸಿಂಹ, ಕು॥ ಅನಘ (ಮೊಮ್ಮಗಳು) ಮತ್ತು ಶ್ರೀ ಜಿ.ಎಲ್.ಎನ್. ಸಿಂಹ. ೨೬-೧೧-೨೦೦೮. ಕಳಲೆ

L to R: Sri M.B. Singh, Smt. Prema Simha, Ms. Anagha (grand daughter) and Sri G.L.N. Simha. 26-11-2008. Kalale.



ಎಡದಿಂದ ಬಲಕ್ಕೆ: ಶ್ರೀಮತಿ ಭಾನುಮತಿ ದೇವಿ ಅರಸ್. ಶ್ರೀಮತಿ ಪ್ರೇಮಾ ಸಿಂಹ ಮತ್ತು ಶ್ರೀ ಜಿ.ಎಲ್.ಎನ್. ಸಿಂಹ. ೧೩-೦೪-೨೦೧೪. ಮೈಸೂರು
L to R: Smt. Bhanumati Devi Urs , Smt. Prema Simha and Sri G.L.N. Simha. 13-04-2014. Mysuru.



ಎಡದಿಂದ ಬಲಕ್ಕೆ: ಶ್ರೀ ಜಿ.ಎಲ್.ಎನ್. ಸಿಂಹ. ಶ್ರೀ ಎಚ್.ಎಸ್. ಧರ್ಮೇಂದ್ರ (ರಘು). ಶ್ರೀ ಆರ್.ಜಿ. ಸಿಂಗ್. ಶ್ರೀಮತಿ ಪ್ರೇಮಾ ಸಿಂಹ. ೧೬-೦೬-೨೦೦೩. ಕಳಲೆ
L to R: Sri G.L.N. Simha, Sri H.S. Dharmendra (Raghu), Sri R.G. Singh and Smt. Prema Simha. 16-06-2003. Kalale




ರೋಟರಿ ರಾಮ್‌ಸನ್ಸ್ ಕಲಾ ಪ್ರತಿಷ್ಠಾನ ಪ್ರಶಸ್ತಿ.
ಎಡದಿಂದ ಬಲಕ್ಕೆ ನಿಂತಿರುವವರು: ಶ್ರೀ ಡಿ. ರಾಮ್‌ಸಿಂಗ್ (ಅಧ್ಯಕ್ಷರು, ರಾಮ್‌ಸನ್ಸ್ ಕಲಾ ಪ್ರತಿಷ್ಠಾನ), ಶ್ರೀಮತಿ ಪ್ರೇಮಾ ಸಿಂಹ, ಶ್ರೀ ಜಿ.ಎಲ್.ಎನ್. ಸಿಂಹ, ಶ್ರೀ ಅಜಯ್ ಕುಮಾರ್ ಸಿಂಗ್ (ಅಧ್ಯಕ್ಷರು, ರೋಟರಿ ಮೈಸೂರು) ಮತ್ತು ಡಾ॥ ಸೂರ್ಯನಾಥ ಯು. ಕಾಮತ್ (ಇತಿಹಾಸತಜ್ಞರು)
೨೬-೦೬-೨೦೦೩. ಮೈಸೂರು.

Rotary Ramsons Kala Pratishtana Award.
L-R standing: Sri D. Ram Singh (Chairman, Ramsons Kala Pratishtana), Smt. Prema Simha, Sri G.L.N. Simha, Sri R. Ajay Kumar Singh (President, Rotary Mysore) and Dr. Suryanath U. Kamath (well-known Historian)
26-06-2003, Mysuru



ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿ.
ಸಿಂಹ ಅವರ ಹಿಂದೆ ನಿಂತಿರುವವರು ಶ್ರೀ ಪೀಟರ್ ಲೂಯಿಸ್ ಮತ್ತು ಅವರ ಎಡಕ್ಕೆ ಶ್ರೀ ಚಿರಂಜೀವಿ ಸಿಂಗ್
೦೨-೦೩-೨೦೦೪. ಬೆಳಗಾವಿ.

Honorary Award from Karnataka Lalitakala Academy.
Standing behind Simha is Sri Peter Lewis to whose left is Sri Chiranjeevi Singh
02-03-2004, Belagavi.



ಎಂ. ವೀರಪ್ಪ ಪ್ರಶಸ್ತಿ.
ಎಡದಿಂದ ಬಲಕ್ಕೆ ನಿಂತಿರುವವರು: ಪ್ರೊ. ಎಂ.ಜೆ. ಕಮಲಾಕ್ಷಿ. ಪ್ರೊ. ಬಿ.ಕೆ. ಚಂದ್ರಶೇಖರ್. ಶ್ರೀಮತಿ ನಂದಿನಿ ಆಳ್ವಾ. ಶ್ರೀ ಪಿ.ಜಿ.ಆರ್. ಸಿಂಧ್ಯಾ. ಶ್ರೀ ವಿ. ಪ್ರಫುಲ್ಲಚಂದ್ರ. ಶ್ರೀ ಡಿ.ಕೆ. ಚೌಟ
೧೧-೧೦-೨೦೦೪. ಬೆಂಗಳೂರು.

M. Veerappa Award
L-R standing: Prof. M.J. Kamalakshi, Prof. B.K. Chandrashekar, Smt. Nandini Alva, Sri P.G.R. Sindhya, Sri V. Praphulla Chandra, Sri D.K. Chowta
11-10-2004. Bengaluru



ಕಲಾ ಪ್ರದರ್ಶನ: ದಿವ್ಯ ವರ್ಣ
ಎಡದಿಂದ ಬಲಕ್ಕೆ: ಶ್ರೀ ಜಿ.ಎಲ್.ಎನ್. ಸಿಂಹ, ಶತಾವಧಾನಿ ಡಾ॥ ಆರ್. ಗಣೇಶ್, ಶ್ರೀ ಡಿ. ರಾಮ್‌ಸಿಂಗ್ (ಅಧ್ಯಕ್ಷರು, ರಾಕಪ್ರ), ಶ್ರೀ ಎಂ.ಬಿ. ಸಿಂಗ್ (ಎಕ್ಸಿಕ್ಯೂಟಿವ್ ಟ್ರಸ್ಟೀ, ರಾಕಪ್ರ).
೨೦-೦೫-೨೦೧೧ ರಿಂದ ೨೯-೦೫-೨೦೧೧, ಮೈಸೂರು.

Exhibition: Divya Varna
L-R: Sri G.L.N. Simha, Shatavadhani Dr. R. Ganesh, Sri D. Ram Singh (Chairman, RKP), Sri M.B. Singh (Executive Trustee, RKP)
20-05-2011 to 29-05-2011, Mysuru



ಕಲಾ ಪ್ರದರ್ಶನ: ಮಂತ್ರ ಮುಕುರ @ ಕಲಾ ಧಾರಾ
ಎಡದಿಂದ ಬಲಕ್ಕೆ: ಶ್ರೀ ಎಸ್.ಆರ್. ರಾಮಸ್ವಾಮಿ, ಶ್ರೀ ಜಿ.ಎಲ್.ಎನ್. ಸಿಂಹ, ಶ್ರೀ ಎಂ.ಬಿ. ಸಿಂಗ್ (ಎಕ್ಸಿಕ್ಯೂಟಿವ್ ಟ್ರಸ್ಟೀ, ರಾಕಪ್ರ), ಶ್ರೀ ಡಿ. ರಾಮ್‌ಸಿಂಗ್ (ಅಧ್ಯಕ್ಷರು, ರಾಕಪ್ರ)
೧೩-೦೪-೨೦೧೪, ಮೈಸೂರು.

Exhibition: Mantra Mukura @ Kalaa Dhaaraa
L-R: Sri S.R. Ramaswamy, Sri G.L.N. Simha, Sri M.B. Singh (Executive Trustee, RKP) and Sri D. Ram Singh (Chairman, RKP)
13-04-2014, Mysuru



ಶ್ರೀಸೂಕ್ತ ಪುರುಷಸೂಕ್ತ ರಾಷ್ಟ್ರೀಯ ಕಮ್ಮಟದಲ್ಲಿ ಪ್ರದರ್ಶನ
ಕರ್ನಾಟಕ ಸಂಸ್ಕೃತ ವಿಶ್ವವಿದ್ಯಾಲಯದ ಉಪಕುಲಪತಿ
ಡಾ॥ ಪದ್ಮಾ ಶೇಖರ್ ಅವರಿಂದ ಪ್ರದರ್ಶನ ವೀಕ್ಷಣೆ
೨೩-೦೮-೨೦೧೭, ಮೇಲುಕೋಟೆ.

Exhibition @ National Symposium on Sri Sukta and Purusha Sukta
Vice Chancellor of Karnataka Sanskrit University Dr. Padma Shekhar enamoured by Simha's paintings.
23-08-2017, Melukote

# G. L .N. Simha
# - A Life In Art


By

Dr.R.H.Kulkarni




ಕರ್ನಾಟಕ
ಲಲಿತಕಲಾ
ಅಕಾಡೆಮಿ


Karnataka Lalitakala Akademi

Bangalore 2018

## Contents

# 1 Introduction

G.L.N.Simha is one of the better-known artists of Karnataka, whose creative and artistic oeuvre has been a force majeure in the world of arts both here and abroad in the genre that is now known as 'religious paintings' or as 'Mediative-mystical art'. Scholars assert that 'Meditative art' alone can do justice to Vedic symbolism. The seamless fusion of symbolism and allegorical visuals add to the impact of the painting on the viewer.

G.L.N. Simha was born on 19 December 1937 in Mysuru into an orthodox Sri Vaishnava Brahmin family. He is now in his eighties, lives in a little village, Kalale (Nanjangud Taluk, Mysuru district), under the auspicious shadow of the ancient temple of Sri Lakshmi-Kanthaswamy. His house is as simple as can be.

Life dealt a cruel blow very early in the life of Simha; he lost both his parents and he was too young to realise the tragedy which unravelled as he grew up. Providentially his elder sister, Ranganayakamma and her husband

Sreenivasa Acharya took the young Simha under their protective care providing him both spiritual and temporal support.

It was his brother-in-law's prescient knowledge that saw, in the early sketches and doodles of young Simha, a future and got Simha to study drawing and painting at Chamarajendra Technical Institute (CTI).

G.L.N. Simha's teachers at CTI belong to the legacy of the great and rich traditions of Mysuru School of painting which blossomed in the progressiveness of Mysuru as a 'model state'.

Mysuru in southern India has carved its name for being a progressive State. Many industries that ensured modernisation and educational instiutions that catered to all classes of society were established by the Maharaja. Mysuru is also known for its fine arts which was nurtured and fostered by its royal patrons as well as the wealthy nobility. The Mysuru Royal family had inherited the artistic legacy of the Vijayanagar kingdom and fostered the liberal arts.

Among the Wadiyar kings, the reign of Mummadi Krishnaraja Wadiyar (1799 - 1868 C.E.) brought about a cultural renaissance in the kingdom; Mummadi was a great connoisseur of the liberal arts including Mysuru style of paintings. He has authored more than 50 illustrated manuscripts like the Sri Tattva Nidhi. It was in the courts of Mummadi and his descendants that artists like Shikaripura Tippaji, Tippanna, Javagal Narasimhaiah and several others were 'patronised'.

From the reign of Mummadi Krishnaraja Wadiyar to Nalwadi Krishnaraja Wadiyar, artists worked in the ateliers of the court to produce volumes of illustrated manuscripts, miniature paintings and also created murals that were to adorn the walls of temples and mansions in and around the city.

Maharaja Nalwadi Krishnaraja Wadiyar established an art school in Mysuru as a part of the Industrial School in 1906 and called it CTI. It was meant to train artisans in various fields which would be of help in their day to day life.

CTI boasted of such stalwart teachers like K. Keshavayya, S.R. Iyengar, N.G. Pavanje, P.V.R. Murthy and many others. K.Venkatappa was a student of Industrial school which was the earlier *avatar* of CTI. Later he went to Kolkata (earlier Calcutta) for his diploma course. K.K.Hebbar was also a student at the CTI for a very brief period before he moved to Mumbai for his higher education at Sir J.J.School of Art. The rich artistic tradition that was inherited by the Mysuru artists has been exhibited in the art works that they created.




ಶ್ರೀ ಧನ್ವಂತರೀ. ೨೦೦೩
ಕಾಗದದ ಮೇಲೆ ಪೋಸ್ಟರ್ ಬಣ್ಣ. ೫೧-೬೧ ಸೆ.ಮೀ.
ಸಂಗ್ರಹ: ಮ್ಯೂಝಿಯಮ್ ಆಫ್ ಸೇಕ್ರೆಡ್ ಆರ್ಟ್ಸ್, ಬೆಲ್ಜಿಯಮ್

SRI DHANVATARI. 2003
Poster colours on paper. 51x61 cms
Collection: Museum of Sacred Arts, Belgium

